# ಅಧ್ಯಯನ ಪ್ರಬಂಧ ರಚನೆ-ಪತ್ರಿಕೆ-೫

ವಿಷಯ

## ಜನಪದ ಕಥನ ಗೀತೆಗಳಲ್ಲಿ ಸ್ತ್ರೀ ಸಂವೇದನೆ

೨೦೦೮-೦೯ ನೇ ಸಾಲಿನ ಅಧ್ಯಯನ ಪ್ರಬಂಧ





ಕಾವ್ಯಮಂಡಲ
೧೩/೧೫, ರಾಷ್ಟ್ರೀಯ ವಿದ್ಯಾಲಯ ರಸ್ತೆ,
ಬಸವನಗುಡಿ, ಬೆಂಗಳೂರು-೫೬೦ ೦೦೪



ಮಾರ್ಗದರ್ಶಕರು:
ಡಾ|| ಕುರುವ ಬಸವರಾಜ್
ಪ್ರಾಧ್ಯಾಪಕರು
ಕಾವ್ಯಮಂಡಲ

ವಿದ್ಯಾರ್ಥಿನಿ:
ಪದ್ಮಾವತಿ. ಎನ್
ಕಾವ್ಯಮಂಡಲ



## ಪರಿವಿಡಿ

# ಅರಿಕೆ

'ಜಾನಪದ ಕಥನ ಗೀತೆಗಳಲ್ಲಿ ಸ್ತ್ರೀ ಸಂವೇದನೆ' ಎಂಬ ವಿಷಯವನ್ನು ಕುರಿತು ಅಧ್ಯಯನ ಮಾಡಲು ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯ ಹಂಪಿ ಮತ್ತು ಕಾವ್ಯಮಂಡಲ ಸಂಸ್ಥೆಗೆ ನನ್ನ ಕೃತಜ್ಞತೆಗಳು.

ಅಧ್ಯಯನ ಪ್ರಬಂಧದ ಬಗ್ಗೆ, ವಿಷಯದ ಆಯ್ಕೆ ಬಗ್ಗೆ, ಸಂಶೋಧನೆ ಬಗ್ಗೆ ಹೀಗೆ ಹಲವು ರೀತಿಯಲ್ಲಿ ನಮಗೆ ಪಾಠವನ್ನು ಬೋಧಿಸಿದ ಕಾವ್ಯಮಂಡಲದ ಎಲ್ಲಾ ಶಿಕ್ಷಕ ವೃಂದದವರನ್ನು ನೆನೆಸಿಕೊಳ್ಳುತ್ತಾ ಅವರಿಗೆಲ್ಲಾ ಈ ಮೂಲಕ ಕೃತಜ್ಞತೆಗಳನ್ನು ಹೇಳಲು ಬಯಸುತ್ತೇನೆ.

ಅಧ್ಯಯನದ ಪ್ರತಿ ಹಂತದಲ್ಲಿಯೂ ನನ್ನೊಳಗಿನ ಗ್ರಹಿಕೆಗಳನ್ನು ತಿದ್ದಿ, ತೀಡಿ ಸ್ಪಷ್ಟಗೊಳಿಸಿ ವೈಚಾರಿಕತೆಯನ್ನು ಬೆಳಸಿದ, ಈ ಪ್ರಬಂಧವನ್ನು ರಚಿಸಲು ಮಾರ್ಗದರ್ಶಕರಾದ ಡಾ॥ ಕುರುವ ಬಸವರಾಜ್‌ರವರಿಗೆ ಕೃತಜ್ಞಳಾಗಿದ್ದೇನೆ.

ನನ್ನನ್ನು ಎಂ.ಫಿಲ್ ಪದವಿ ಪಡೆಯಲು ಪ್ರೋತ್ಸಾಹಿಸಿದ, ಬೆಳೆಸಿದ ಪ್ರೊ. ಕಿ.ರಂ.ನಾಗರಾಜರವರಿಗೆ ನಾನು ಸದಾ ಚಿರಋಣಿ.

ಪ್ರಬಂಧ ಬರೆಯಲು ಮನೆಯಲ್ಲಿ ನನಗೆ ಎಲ್ಲಾ ರೀತಿಯಿಂದಲೂ ಸಹಾಯ ಮಾಡಿದ ನನ್ನ ಪ್ರೀತಿಯ ಅಮ್ಮನಿಗೆ ಮತ್ತು ನನ್ನ ವಿದ್ಯಾಭ್ಯಾಸ ಇಲ್ಲಿಯವರೆಗೂ ಮುಂದುವರೆಯಲು ಅವಕಾಶ ಮಾಡಿಕೊಟ್ಟ ನನ್ನ ನೆಚ್ಚಿನ ಶಿಕ್ಷಕರಾದ ಗುಲಾಬಿ ಮತ್ತು ರಾಮೇಗೌಡ ಮೇಷ್ಟ್ರುಗೆ ನನ್ನ ನಮನಗಳು.

ಕೆಲವೊಂದು ಬಾರಿ ಅಧ್ಯಯನವನ್ನು ಅರ್ಧಕ್ಕೆ ಬಿಡುವ ಮನಸ್ಸಾಗುತ್ತಿತ್ತು. ಅಂತಹ ಸಮಯದಲ್ಲಿ ನನಗೆ ಆತ್ಮ ವಿಶ್ವಾಸ, ಉತ್ಸಾಹಗಳನ್ನು ತುಂಬಿ ಹುರಿದುಂಬಿಸಿದಲ್ಲದೆ, ನನಗೆ ಅಧ್ಯಯನಕ್ಕೆ ಪೂರಕವಾಗುವಂತ ಪುಸ್ತಕಗಳನ್ನು ಒದಗಿಸಿಕೊಟ್ಟು ನೈತಿಕ ಬೆಂಬಲ ನೀಡಿದ ಗೆಳೆಯ ಅಂಬರೀಶ್ ಹಾಗೂ ಗೆಳತಿಯರಾದ ಪ್ರತಿಭಾ, ಶೋಭರಾಣಿ, ಭಾರತಿಗೆ ನಾನು ಸದಾ ಚಿರಋಣಿ.

ಅಧ್ಯಯನಕ್ಕೆ ಸಂಬಂಧಿಸಿದ ಪುಸ್ತಕಗಳನ್ನು ಒದಗಿಸಿದ ಮಿಥಿಕ್ ಸೊಸೈಟಿ ಮತ್ತು ನಗರ ಕೇಂದ್ರ ಗಂಥಾಲಯ, ಕೋಲ್ಸ್ ಪಾರ್ಕ್, ಬೆಂಗಳೂರು ವಿಶ್ವವಿದ್ಯಾಲಯ ಗ್ರಂಥಾಲಯದ ಸಿಬ್ಬಂದಿವರ್ಗದವರಿಗೆ ನಾನು ಅಭಾರಿಯಾಗಿದ್ದೇನೆ.

ಜಾನಪದ ಲೋಕದಲ್ಲಿ ಕಥನ ಗೀತೆಗಳನ್ನು ಹಾಡಿದ ಉಮೇಶ್ ಮತ್ತು ಅವರಗೆಲ್ಲಾ ನಾನು ಪ್ರೀತಿಯಿಂದ ನೆನಪಿಸಿಕೊಳ್ಳುತ್ತೇನೆ. ಸರ್ವ ಶಿಕ್ಷಣ ಅಭಿಯಾನ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ನನ್ನ ಅಧ್ಯಯನದ ಬಗ್ಗೆ ಸಂತೋಷಗೊಂಡು ನನ್ನಲ್ಲಿ ಇನ್ನಷ್ಟು ಚೈತನ್ಯವನ್ನು ತುಂಬಿದ ಮಂಗಳ ನಾಯಕ್, ಮಂಜುನಾಥ ಸರ್, ಪದ್ಮನಾಭ ಸರ್ ಮತ್ತು ಷಂಶುನ್ನಿಸಾ ಮತ್ತು ಇದನ್ನು ಅಚ್ಚುಕಟ್ಟಾಗಿ ಡಿ.ಟಿ.ಪಿ ಮಾಡಿಕೊಟ್ಟ ರೂಪಳಿಗೆ ನನ್ನ ಅನಂತ ಧನ್ಯವಾದಗಳು.

# ಪ್ರಮಾಣ ಪತ್ರ

ಕನ್ನಡ ಎಂ.ಫಿಲ್ ಪದವಿಯ ಅಧ್ಯಯನದ ಅಂಗವಾಗಿ ಐದನೇ ಪತ್ರಿಕೆಗಾಗಿ **'ಜನಪದ ಕಥನ ಗೀತೆಗಳಲ್ಲಿ ಸ್ತ್ರೀ ಸಂವೇದನೆ'** ಎಂಬ ವಿಷಯವನ್ನು ಡಾ॥ ಕುರುವ ಬಸವರಾಜು ಇವರ ಮಾರ್ಗದರ್ಶನದಲ್ಲಿ, ಕಾವ್ಯ ಮಂಡಲ ಸಂಸ್ಥೆಯ ವತಿಯಿಂದ ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ಪ್ರಬಂಧವೆಂದು ದೃಢೀಕರಿಸುತ್ತೇನೆ.

ಸ್ನಾತಕೋತ್ತರ ಅಧ್ಯಯನದ ಅವಧಿಯಲ್ಲಿ ಪಡೆದ ಜ್ಞಾನಾರ್ಜನೆ ಹಾಗೂ ನನ್ನಲ್ಲಿ ತುಡಿಯುತ್ತಿರುವ ವಿಚಾರಕ್ಕೆ ವಿಮರ್ಶೆಯ ಸ್ಪರ್ಶದಿಂದ ಸಿದ್ಧಗೊಂಡಿರುವ ಸಂಪೂರ್ಣ ಸ್ವತಂತ್ರ ಪ್ರಬಂಧವೆಂದು, ಇದನ್ನು ಬೇರೆಯಾವುದೇ ಪದವಿಗಾಗಲಿ, ವಿಶ್ವವಿದ್ಯಾಲಯಕ್ಕಾಗಲಿ ಬಳಸಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಪದ್ಮಾವತಿ. ಎನ್
ಪದ್ಮಾವತಿ. ಎನ್

ದಿನಾಂಕ: 4/10/08
ಸ್ಥಳ: ಬೆಂಗಳೂರು

# ದೃಢೀಕರಣ ಪತ್ರ

ಕನ್ನಡ ಎಂ.ಫಿಲ್ ಪದವಿಯ ಅಧ್ಯಯನದ ಅಂಗವಾಗಿ ಐದನೇ ಪತ್ರಿಕೆಗಾಗಿ **'ಜನಪದ ಕಥನ ಗೀತೆಗಳಲ್ಲಿ ಸ್ತ್ರೀ ಸಂವೇದನೆ'** ಎಂಬ ವಿಷಯವನ್ನು ಕಾವ್ಯ ಮಂಡಲದ ಸಂಸ್ಥೆಯ ವತಿಯಿಂದ ಡಾ॥ ಕುರುವ ಬಸವರಾಜುರವರ ಮಾರ್ಗದರ್ಶನದಲ್ಲಿ ಪ್ರಬಂಧವನ್ನು ಸಿದ್ಧಪಡಿಸಿರುತ್ತಾರೆ. ಈ ಪ್ರಬಂಧವನ್ನು ಬೇರೆ ಯಾವುದೇ ಪದವಿಗಾಗಲಿ, ವಿಶ್ವವಿದ್ಯಾಲಯಕ್ಕಾಗಲಿ ಬಳಸಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ದಿನಾಂಕ:

ಸ್ಥಳ: ಬೆಂಗಳೂರು

ಡಾ॥ ಕುರುವ ಬಸವರಾಜು

ಅಧ್ಯಾಪಕರು

ಕಾವ್ಯಮಂಡಲ

ಅಧ್ಯಾಯ–1

# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಕನ್ನಡದಲ್ಲಿ ಜನಪದ ಕಥನ ಕಾವ್ಯಕ್ಕೆ ಕಥೆಯ ಹಾಡುಗಳು, ಹಾಡ್ಗತೆ, ಕಥಾಗೀತೆ, ಹಾಡಿನ ಕಥೆ, ಕಾವ್ಯಕತೆ, ಪದ್ಯಕತೆ ಇತ್ಯಾದಿ ಹೆಸರುಗಳಿಂದ ಕರೆಯುತ್ತಾರೆ. ಕಥನ ಗೀತೆಗಳಲ್ಲಿ ಮುಖ್ಯವಾಗಿ ಕಥೆ ಇರುತ್ತದೆ ಮತ್ತು ಅದು ಹಾಡಿನೊಂದಿಗೆ ಸಂಬಂಧ ಹೊಂದಿರುತ್ತದೆ. ಜನಪದರು ಘಟನೆಗಳನ್ನು ಪಾತ್ರಗಳನ್ನು ತೆಗೆದುಕೊಂಡು ಅವರು ಹಾಡಿನ ಮೂಲಕ ಕಥೆಯನ್ನು ಅಭಿವ್ಯಕ್ತಿಸುತ್ತಾರೆ. ಈ ಕಥೆಗಳು ಬರೀ ಕಥೆಯಲ್ಲ, ಬರೀ ಹಾಡಲ್ಲ, ಘಟನೆ ಪಾತ್ರಗಳ ಮೂಲಕ ಅಭಿವ್ಯಕ್ತಿಸುವ ಕಥನ ಗೀತೆಗಳು.

ಜನಪದ ಕಥೆಗಳ ಒಂದು ಮುಖ್ಯ ಆಶಯ (Motif) ಅಥವಾ ಹಲವು ಆಶಯಗಳಿಂದ ಕತೆ ನಿರ್ಮಾಣವಾಗಿರುತ್ತದೆ. ಈ ಕಥನ ಗೀತೆಗಳಲ್ಲಿ ಸಾಮಾಜಿಕ ಒತ್ತಡವಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಇಲ್ಲಿನ ಕಥವಿಧಾನ ಸರಳವಾದುದಲ್ಲ, ಸಂವಾದದ ಚಕಮಕಿ ಅಂತ್ಯದ ಆಜುಬಾಜಿನ ಮೂಲಕ ಓಡುವ ನಡೆಗೆ ಬದುಕನ್ನು ತೀವ್ರವಾಗಿ ಅನುಭಸುವ ಕಳಕಳಿ ಪ್ರಧಾನವಾಗಿರುತ್ತದೆ.

ಜನಪದ ಕಥನ ಗೀತೆಗಳು, ಒಳ್ಳೆಯದು, ಕೆಟ್ಟದು, ಔದಾರ್ಯ, ಚಾತುರ್ಯ ಅಷ್ಟೇ ಅಲ್ಲದೆ ತಾವು ಕಂಡ, ಅನುಭವಿಸಿದ ರೂಪಗಳನ್ನೆಲ್ಲಾ ತೆರೆದಿಡುವ ಮೂಲಕ ಬದುಕನ್ನು ಹೇಗೆ ಗ್ರಹಿಸಿದ್ದಾರೆ ಎಂಬುದನ್ನು ನೊಡಬಹುದು. ಒಟ್ಟಾರೆಯಾಗಿ ಹೇಳುವುದಾದರೆ ಪರಂಪರೆಯ ರೀತಿನೀತಿಗಳ ಸಂಸ್ಕೃತಿಯ ವಿವರಣೆ ಇಲ್ಲಿರುವುದನ್ನು ಕಾಣಬಹುದು.

ಸಾಮಾನ್ಯವಾಗಿ ಜನಪದ ಕಥನ ಗೀತೆಗಳಲ್ಲೆಲ್ಲಾ ಸ್ತ್ರೀ ಕೇಂದ್ರಿತ ಕಥನ ಗೀತೆಗಳೇ ಹೆಚ್ಚಾಗಿರುವಂತಹವು. ಇವುಗಳನ್ನು ಪುರುಷರು ಕಟ್ಟಿದ್ದಾರೆ ಎಂಬುದಕ್ಕಿಂತ ಸ್ತ್ರೀಯರೇ ದಟ್ಟೈಸಿ ಕಟ್ಟಿರುತ್ತಾರೆ. ಈ ಕಥನ ಗೀತೆಗಳಲ್ಲಿ ಸ್ತ್ರೀಯರ ಬದುಕನ್ನು ಪ್ರತಿನಿಧಿಸುತ್ತದೆ. ಜೊತೆಗೆ ಅವರ ಅನ್ಯ ಮುಖದ ಪರಿಚಯಗಳನ್ನು ಹೇಳುತ್ತವೆ. ಒಂದು ಕಡೆ ಸ್ತ್ರೀಯರ ಬದುಕು ಆದರ್ಶದ ರೀತಿಯಲ್ಲಿ ಕಂಡುಬಂದರೆ, ಅದೇ ಪರಿಸ್ಥಿತಿಯಲ್ಲಿ ಹೇಗೆ ಅವಳು ಈ ಸಾಮಾಜಿಕ ಪರಿಸ್ಥಿಯ ಮಧ್ಯೆ ಸಿಲುಕಿದ್ದಾಳೆ ಎಂಬುದನ್ನು ನೋಡಬಹುದು.

ಹೀಗೆ ಹೊಯ್ದಾಟಗಳ ಮಧ್ಯೆಯೂ ಅವಳು ಯಾವ ರೀತಿ ನಡೆದುಕೊಂಡರೆ ಸರಿ ಎನ್ನುವ ಮೂಲಕ, ಬೇರೆಯವರು ಸಹ ಅವಳನ್ನು ಯಾವ ರೀತಿ ನಡೆಸಿಕೊಳ್ಳಬೇಕು ಎಂಬುದರ ಜೊತೆಗೆ ಯಾರೂ ಮೇಲಲ್ಲ, ಯಾರೂ ಕೀಳಲ್ಲ ಎಂಬ ಅಂಶವನ್ನು ಇವರು ವ್ಯಕ್ತಪಡಿಸುತ್ತಿರುವುದನ್ನು ಕಥನ ಗೀತೆಗಳಲ್ಲಿ ಕಾಣಬಹುದು.

ಜನಪದ ಕಥನ ಗೀತೆಗಳನ್ನು ಸ್ಥೂಲವಾಗಿ ವರ್ಗೀಕರಿಸುವುದರ ಮೂಲಕ ಅರ್ಥಮಾಡಿಕೊಳ್ಳಲು ಪ್ರಯತ್ನ ಮಾಡಬಯಸುತ್ತೇನೆ. ಜನಪದ ಗೀತೆಗಳನ್ನು ಹಾರಕ್ಕೆ ಸಂಬಂದಿಸಿದ, ಪತಿವ್ರತ ಕೇಂದ್ರಿತ, ತಾಯ್ತನ, ಬಂಜೆತನ, ತವರು ಮನೆ, ಅಣ್ಣ ತಂಗಿಯ ಸಂಬಂಧ, ಅತ್ತೆ ಸೊಸೆ, ನಾದಿನಿ, ಅಂದರೆ ಸ್ತ್ರೀ-ಪುರುಷ ಗೌನಗಳ ಸಂಬಂಧ, ಸ್ತ್ರೀ-ಸ್ತ್ರೀ ನಡುವಿನ ಗೌನಗಳು, ಸ್ತ್ರೀ- ಅನ್ಯ ಪುರುಷರ ಗೌನಗಳು, ಸ್ತ್ರೀ-ಅನ್ಯ ಸ್ತ್ರೀಯರ ಗೌನಗಳು ಯಾವ ರೀತಿ ಇವೆ ಎಂಬುದನ್ನು ಕಾಣುವ ಮೂಲಕ ಸತ್ಯ ಕಾಣುವುದಾಗಿದೆ. ಇವುಗಳೆಲ್ಲದರ ಕೇಂದ್ರ ಸ್ತ್ರೀಯಾಗಿರುವುದರಿಂದ ಸ್ತ್ರೀ ಸಂವೇದನೆ ಎಂಬ ಶೀರ್ಷಿಕೆಯನ್ನು ಆಯ್ದುಕೊಳ್ಳಲಾಗಿದೆ.

ಕಥನ ಗೀತೆಗಳ ವ್ಯಾಪ್ತಿ ವಿಸ್ತಾರವಾದದು. ಆದ್ದರಿಂದ ವರ್ಗೀಕರಣಕ್ಕೆ ಅನುಸಾರವಾಗಿ ಕಥನ ಗೀತೆಗಳನ್ನು ಬಳಸಿಕೊಂಡಿದ್ದೇನೆ. ಇಲ್ಲಿ ಸ್ತ್ರೀ ಕೇಂದ್ರಿತಕ್ಕೆ ಹೆಚ್ಚು ಒತ್ತು ನೀಡಿದರೂ ಒಟ್ಟಾರೆಯಾಗಿ ಎಲ್ಲಾ ವಿಮರ್ಶ ಮಾನದಂಡಗಳಿಂದ ಈ ಕಥನ ಗೀತೆಗಳನ್ನು ಕಟ್ಟಿಕೊಡುವುದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ.

ಹೆಣ್ತನ ಪರಿಪೂರ್ಣತೆಯೆಂದರೆ ಅದು ತಾಯ್ತನ. ಹೆಣ್ಣು ತಾನು ತಾಯಿಯಾಗಿ ಜನ್ಮ ಸಾರ್ಥಕ ಪಡಿಸಿಕೊಳ್ಳಬೇಕೆಂದು ಹಂಬಲಿಸಿ ಅವಳು ಹೇಳಿದ ವ್ರತಗಳನ್ನು ಆಚರಿಸುವ ಬಗೆ, ಮದ್ದು ಮಂತ್ರಗಳಿಗೆಲ್ಲ ತನ್ನನ್ನು ಒಪ್ಪಿಸಿಕೊಳ್ಳುತ್ತಾಳೆ. ಹೆಣ್ಣಿನ ಮೂಲ ಪ್ರವೃತ್ತಿ ಇರುವುದೇ ಅವಳ ತಾಯ್ತನದಲ್ಲಿ. ಆದ್ದರಿಂದಲೇ ಗಂಡು ಅವಳನ್ನು ಉದ್ದೀಪನಗೊಳಿಸದೆ ಅದನ್ನು ಹತ್ತಿಕ್ಕುವ ಮೂಲಕ ತನ್ನ ಪ್ರಾಬಲ್ಯವನ್ನು ಬಲಪಡಿಸಿಕೊಂಡಿದ್ದಾನೆ ಎಂಬುದನ್ನು ನೋಡಬಹುದು.

ತಾಯ್ತನಕ್ಕೆ ವಿರೋಧವಾದುದು ಬಂಜೆತನ. ಇದಕ್ಕೆ ಇವಳು ಒಬ್ಬಳೇ ಕಾರಣವಲ್ಲ ಎಂಬುದನ್ನು ತಿಳಿದು ಅಪವಾದಿಸುತ್ತಿದೆಯೇ ಅಥವಾ ಅವಳನ್ನು ಪರೀಕ್ಷಿಸಲು ಪ್ರಯತ್ನಿಸುತ್ತಿದೆಯೇ ಎಂಬುದನ್ನು ನೋಡುತ್ತಿದೆ. ಆದರೆ ಪುರುಷರು ಈ ರೀತಿಯ ನಿಂದನೆಗಳಿಗೆ ಒಳಗಾಗುವುದಿಲ್ಲ "ಕಂದನ ಕೊಡು ಶಿವನೆ ಬಂಧನ ಪಡಲಾರೆ" ಎಂದು ಹೇಳುವಲ್ಲಿ ಅವಳು ಬಂಜೆತನದಿಂದ ಹೇಗೆ ಬಂಧನಕ್ಕೆ ಒಳಪಟ್ಟಿದ್ದಾಳೆ ಎಂಬ ಅಂಶವನ್ನು ನೋಡಬಹುದು. ಶಿವ ಪಾರ್ವತಿಯರ ಅನುಗ್ರಹದಿಂದ ಮಕ್ಕಳನ್ನು ಪಡೆದು ಆ ಮಕ್ಕಳನ್ನು ನನಗೆ ಭೋಜನವಾಗಿ ಅರ್ಪಿಸಬೇಕೆಂದು ಹೇಳಿ ಅವಳನ್ನು ಪರೀಕ್ಷಿಸುವ ಸಂದರ್ಭಗಳು, ಗಂಡನು ಅನುಮಾನಿಸುವ ಪ್ರಸಂಗಗಳು, ಯಾವ ರೀತಿಯದು ಎಂಬುದನ್ನೆಲ್ಲಾ ನೋಡುವ ಮೂಲಕ, ಇವುಗಳ ಒಟ್ಟಾರೆ ಆಶಯಗಳೇನು, ಮನೋ ನೆಲೆಗಳೇನು ಎಂಬುದನ್ನು ಕಂಡುಕೊಳ್ಳುವುದಾಗಿದೆ.

ಅದೇ ರೀತಿ ಪತಿವ್ರತ ಕೇಂದ್ರಿತ ಕಥನ ಗೀತೆಗಳನ್ನು ಅಭ್ಯಾಸ ಮಾಡಿದಾಗ ಜನಪದರ ಮನೋ ಪ್ರವೃತ್ತಿಗಳೇನು? ಎಂಬುದನ್ನ ಅರ್ಥಮಾಡಿಕೊಳ್ಳಬಹುದಾಗಿದೆ. ಪುರುಷನಿಗೆ ಏಕೆ ಅಪವಾದಿಸುವುದಿಲ್ಲ ಎಂಬ ಅಂಶವನ್ನು ಕಥನ ಗೀತೆಗಳಲ್ಲಿ ನೋಡಬಹುದಾಗಿದೆ. ಮಲ್ಲಿಗೆರಾಯ, ಹೊನ್ನಮ್ಮ ಕಥನ ಗೀತೆಗಳು ಮೇಲುನೋಟಕ್ಕೆ ಹೆಣ್ಣು ಯಾವೆಲ್ಲ ಕಷ್ಟಗಳಿಗೆ ಸಿಲುಕಿದ್ದಾಳೆ ಎಂಬುದರ ಜೊತೆಗೆ ಅವಳ ಒಟ್ಟಾರೆ ಧ್ವನಿ ಏನಾಗಿದೆ? ಯಾವುದರ ಕಡೆ ಇದೆ? ಎಂಬುದನ್ನು ವ್ಯಕ್ತಪಡಿಸುತ್ತಿರುವುದನ್ನು ಕಾಣಬಹುದಾಗಿದೆ. ಆದ್ದರಿಂದಲೇ ಜನಪದ ಕಾವ್ಯ ಬದುಕನ್ನು ಪೂರ್ಣ ದೃಷ್ಠಿಯಿಂದ ನೋಡುತ್ತಿದೆ. ಬದುಕಿನ ಎಲ್ಲಾ ಆಯಾಮಗಳನ್ನು ಸ್ಪರ್ಶಿಸುತ್ತದೆ. ಮನುಷ್ಯನ ಮೂಲ ಸ್ವಭಾವಗಳನ್ನು ಅತ್ಯಂತ ಸೂಕ್ಷ್ಮವಾಗಿ ವರ್ಣಿಸುತ್ತದೆ. ಸಂಶಯ ಅಪಾಯಕಾರಿ ಎಂಬ ಅಂಶವನ್ನು ಯಾವ ರೀತಿ ಬಿಂಬಿಸುತ್ತಿದ್ದಾರೆ ಎಂಬುದನ್ನು ಅರ್ಥ ಮಾಡಿಕೊಳ್ಳಬಹುದಾಗಿದೆ.

ಹಾರಕ್ಕೆ ಸಂಬಂಧಿಸಿದ ಅಥವಾ ಹಾರ ಕೇಂದ್ರಿತ ಜನಪದ ಕಥನ ಗೀತೆಗಳು ಯಾವ ರೀತಿ ಕಟ್ಟಲ್ಪಟ್ಟಿವೆ ಎಂಬುದನ್ನು ಕಥನ ಗೀತೆಗಳು ಪ್ರತಿಬಿಂಬಿಸುತ್ತಿವೆ. ಇದಕ್ಕೆ ಸಾಕ್ಷಿ ರೂಪದಂತೆ ವೀರಗಲ್ಲುಗಳು ಮತ್ತು ಮಹಾಸತಿಯಾಗಿರುವ ಕುರುಹುಗಳು ದೊರೆಯುತ್ತವೆ. ಈ ಆಚರಣೆಗಳು ಎಷ್ಟೇ ಸಮಾಜ ವಿರೋಧಿಯಾದರೂ ಸಾಮಾಜಿಕ ವ್ಯವಸ್ಥೆಯಲ್ಲಿ ಪ್ರಸ್ತುತ ಆಚರಣೆಗಳು ಇರುವುದನ್ನು ನೋಡಬಹುದು. ಆದರೆ ಅದರ ರೂಪ ಬದಲಾಗಿರುವುದನ್ನು ಕಾಣಬಹುದಾಗಿದೆ. ಇವುಗಳ ಮೂಲಕ ಚಾರಿತ್ರಿಕ ಅಂಶಗಳನ್ನು ಕಂಡುಕೊಳ್ಳಬಹುದಾಗಿದೆ. ಸಮಾಜದ ಇಕ್ಕಟ್ಟಿನ ಪರಿಸ್ಥಿಯಲ್ಲಿ ಒಂದು ಕುಟುಂಬದ ಸದಸ್ಯರೆಲ್ಲರು ಸಿಲುಕಿಕೊಂಡಿರುವ ಬಗೆಯನ್ನು, ಸಮಾಜದ ಕಟ್ಟುಪಾಡುಗಳು ಮತ್ತು ಇತರ ಬಗೆಗಳು ಅಂದರೆ ಯಾವ ವಿಮರ್ಶೆ ಮನೋ ನೆಲೆಗಳಿಂದ ನೋಡಿದಾಗ ಹೇಗೆ ಹೇಗೆ ಕಾಣುತ್ತದೆ ಎಂಬುದನ್ನು ನೊಡುವುದಾಗಿದೆ.

ಕಥನ ಗೀತೆಗಳಲ್ಲಿ ಭಾಷೆಯನ್ನು ಹೇಗೆ ಬಳಸಿಕೊಂಡಿದ್ದಾರೆ ಎಂಬುದರ ಜೊತೆಗೆ ಪ್ರತಿಮೆ, ಸಂಕೇತಗಳ ಮೂಲಕ ಹೇಗೆ ಬಳಸಿಕೊಂಡಿದ್ದಾರೆ ಎಂಬುದನ್ನು ನೋಡುವುದಾಗಿದೆ.
ಉದಾಹರಣೆಗೆ: ಉತ್ತರಿ ಮಳೆಯಾಗಿ ಹರಿದಾಳು ಎನ್ನುವಲ್ಲಿ ಮಳೆಯ ಸಾಂಕೇತಿಕತೆ ಯಾವ ರೀತಿ ಇದೆ ಎಂಬುದನ್ನು ನೋಡುವುದಾಗಿದೆ.

ಅಧ್ಯಾಯ–2

## ಜನಪದ ಕಥನ ಗೀತೆಗಳ ಸ್ವರೂಪ ಮತ್ತು ವಿನ್ಯಾಸ

ಜನಪದರು ತಾವು ಕಂಡ ಘಟನೆಗಳನ್ನು, ಅನುಭವಗಳನ್ನು ಸುವ್ವಿಲಾಲಿ, ಕೋಲು ಕೋಲೆ, ತಂದನಂದಾನ ಎಂದು ಕೊನೇ ಪದವನ್ನಿಟ್ಟು ಕಥನ ಗೀತೆಗಳನ್ನು ರಚಿಸಿದ್ದಾರೆ. ಕಥನ ಗೀತೆಗಳನ್ನು ದ್ವಿಪದಿ, ತ್ರಿಪದಿ, ಚೌಪದಿಗಳಲ್ಲಿ ರಚಿಸಿದ್ದಾರೆ. ಕಥೆಯ ಜೊತೆಗೆ ಸಂಗೀತವೂ ಮುಂದುವರೆಯುತ್ತಾ ಹೋಗುತ್ತದೆ. ದೀರ್ಘವಾದ ಕಥನ ಗೀತೆಗಳು ಪಲ್ಲವಿಯನ್ನು ಪ್ರತಿ ಎರಡನೆ ಸಾಲಿನ ಕೊನೆಯಲ್ಲಿ ಹಾಡಿಕೊಳ್ಳುತ್ತಾರೆ. ಇದನ್ನು ನಾವು ಕಾಳಿಂಗರಾಯ, ಗುಣಸಾಗರಿ ಕೆಂಚಮ್ಮ ಕಥನ ಗೀತೆಗಳಲ್ಲಿ ನೋಡಬಹುದು.

ಕಥನ ಗೀತೆಗಳ ಆರಂಭದಲ್ಲಿ ಪ್ರಾರ್ಥನಾ ಪದ್ಯಗಳು, ಜನಪದರು ಪೂಜಿಸುವಂತ ದೇವತೆಗಳನ್ನು ಸ್ಮರಿಸಿಕೊಳ್ಳುವುದು, ತನಗೆ ನೀತಿ ಹೇಳುತ್ತಿದ್ದ ಹಿರಿಯರನ್ನು ಸ್ಮರಿಸಿಕೊಳ್ಳುವುದನ್ನು ನೋಡಬಹುದು. ಇದು ನಾವು ಯಾವ ರೀತಿ ಮುನ್ನುಡಿ ಮತ್ತು ಹಿನ್ನುಡಿಗಳನ್ನು ಬರೆಯುತ್ತೇವೋ ಆ ರೀತಿ ಜನಪದರು ತಮ್ಮ ಗೀತೆಗಳಲ್ಲಿ ಮೊದಲು ಅಥವಾ ಕೊನೆಯಲ್ಲಿ ಸ್ಮರಿಸಿಕೊಳ್ಳುತ್ತಾರೆ.

ಜನಪದರ ಕಥನ ಗೀತೆಗಳು ಸೀತೆಯನ್ನಾಗಲಿ, ರಾಮನನ್ನಾಗಲಿ ಕಥಾವಸ್ತುವನ್ನಾಗಿ ಆಯ್ಕೆ ಮಾಡಿಕೊಳ್ಳುವುದಕ್ಕಿಂತ ಅವರ ನಡುವೆ ಬದುಕಿ ಬಾಳಿದಂತ ವ್ಯಕ್ತಿಯನ್ನು ತಮ್ಮ ಕಥನ ಗೀತೆಗಳ ಪಾತ್ರವಾಗಿಸಿದ್ದಾರೆ. ಗುಣಸಾಗರಿ ಹೆಣ್ಣುಮಗಳ ವ್ಯಕ್ತಿತ್ವವನ್ನು ಸೀತೆಯ ವ್ಯಕ್ತಿತ್ವದಲ್ಲಿ ಪ್ರತೀಕವಾಗಿಸಿದ್ದಾರೆ. ಅತ್ತೆಯ ಗುಣಗಳು, ಜೊತೆಗೆ ಸೊಸೆಯ ಗುಣಗಳನ್ನು ತಿಳಿಸುವ ಮೂಲಕ ನೈತಿಕತೆಯ ವಿಶಿಷ್ಟತೆಯನ್ನು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ. ಇಲ್ಲಿ ಶಿಷ್ಟರ ಉಳಿವು ಮತ್ತು ದುಷ್ಟರ ಅಳಿವನ್ನು ಮೆರೆದಿದ್ದಾರೆ. ಇದನ್ನು ನಾವು ನಾಗರ ಪಂಚಮಿ, ಗುಣಸಾಗರಿ ಕಥನ ಗೀತೆಗಳಲ್ಲಿ ನೋಡಬಹುದು.

ಆತ್ಮಾರ್ಪಣೆ ಕಥನ ಗೀತೆಗಳು ಹಾರಕೇಂದ್ರಿತವಾಗಿದ್ದರೂ, ಪ್ರೇಮ ಕಾವ್ಯಗಳನ್ನಾಗಿಯೂ ನೋಡಬಹುದು. ಹಾರಕೇಂದ್ರಿತ ಕಥನ ಗೀತೆಗಳ ಸ್ವರೂಪವನ್ನು ಗಮನಿಸಿದರೆ ಈ ಕಥನ ಗೀತೆಗಳು ಪ್ರಾರಂಭದಲ್ಲಿ ಊರಿನ ಗೌಡನು ನಾಡಿನ ಹಿತಕ್ಕಾಗಿ, ಜನೋಪಕಾರಕ್ಕೆ ಕೈಗೊಂಡ ಕೆಲಸದಲ್ಲಿ ತೊಂದರೆ ಅನುಭವಿಸಿದಾಗ ಪಂಚಾಂಗದಲ್ಲಿ ಅದಕ್ಕೆ ಪರಿಹಾರ ಹುಡುಕುವುದು. ಅದರಲ್ಲಿ ತನ್ನ ಮನೆಯ ಹೆಣ್ಣು ಮಗಳನ್ನೆ ಹಾರವಾಗಿಸುವಂತಹ ವಿಷಯ ತಿಳಿದುಬರುತ್ತದೆ. ಇಲ್ಲಿ ಹಾರವಾಗಿಸಲು ಇಷ್ಟವಿಲ್ಲದ

ಪರಿಸ್ಥಿತಿ ಇದ್ದರೂ ಯಾರು ಅದನ್ನು ತಡೆದು ನಿಲ್ಲಿಸಲು ಅಸಾಧ್ಯವಾಗಿರುವಂತ ಪರಿಸ್ಥಿತಿಯ ರೂಪವನ್ನು ಕಥನ ಗೀತೆಗಳು ಪಡೆದುಕೊಂಡಿವೆ.

ಹಲ್ಲಿ ಬಾಗಿಲಲ್ಲಿ ಬಡಿದುಕೊಳ್ಳುವುದಗಾಲಿ, ಹೆಂಡತಿ ಗಂಡನನ್ನು ವ್ಯಾಪಾರಕ್ಕೆ ತಡೆಯುವುದಾಗಲಿ ಮುಂದೆ ಬರುವ ಅಪಾಯಗಳನ್ನು ತಡೆಯುವಷ್ಟು ಶಕ್ತಿಶಾಲಿಗಳಾದವಲ್ಲ ಎಂಬಂತೆ ಕಥನ ಗೀತೆಗಳನ್ನು ರೂಪಿಸಿದ್ದಾರೆ. ಮನುಷ್ಯ ಕಷ್ಟಬಂದಾಗ ಹಿಂಜರಿಯದೇ ಜೀವನವನ್ನು ನಡೆಸುವ ಬಗೆಯನ್ನು ತಿಳಿಯಪಡಿಸುತ್ತವೆ. ಕಥನ ಗೀತೆಗಳಲ್ಲಿ ಎಲ್ಲೂ ಅವಳು ತನ್ನ ಕಷ್ಟಗಳ ಬಗ್ಗೆ ಎದುರು ಮಾತಾನಾಡದೆ ಅನುಭವಿಸಿ ಯಶಸ್ಸನ್ನು ಪಡೆಯುವುದನ್ನು ಪತಿವ್ರತ ಕಥನ ಗೀತೆಗಳಲ್ಲಿ ಕಾಣಬಹುದು. ಗಂಡಿಗೆ ಎಷ್ಟು ಮಹತ್ವವನ್ನು ಕೊಟ್ಟಿದ್ದಾರೋ ಹೆಣ್ಣಿಗೂ ಅಷ್ಟೆ ಮಹತ್ವವನ್ನು ಕೊಟ್ಟಿದ್ದಾರೆ. ಮೇಲು ಕೀಳು ಎಂಬುದಕ್ಕಿಂತ ಅವರವರ ಗುಣಗಳು ಅವರವರಲ್ಲಿರಬೇಕು.

ಅತ್ತೆ ಸೊಸೆಯರ ಸಂಬಂಧವನ್ನು ಕಥನ ಗೀತೆಗಳಲ್ಲಿ ಸತ್ಯವಂತೆ ಹಡೆದವ್ವ ಮತ್ತು ಮಲ್ಲಿಗೆ ದೇವಿ ಕಾವ್ಯ ಅತ್ತೆ ಸೊಸೆಯನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ ಮತ್ತು ಸೊಸೆ ಅತ್ತೆಯನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ ಎಂಬುದನ್ನು ತಿಳಿಸುತ್ತವೆ. ಇಲ್ಲಿ ಯಾರು ಸತ್ಯವಂತರಾಗಿರುತ್ತಾರೊ ಅವರಿಗೆ ಜಯವು ದೊರೆಯುವಂತಹದ್ದು. ಅತ್ತೆಯಾದವರು ಸೊಸೆಯನ್ನು ಯಾವ ರೀತಿ ನೊಡಿಕೊಳ್ಳಬೇಕು, ಸೊಸೆ ಅತ್ತೆಯನ್ನು ಯಾವ ರೀತಿ ನೋಡಿಕೊಳ್ಳಬೇಕು ಎಂಬದನ್ನು ತಿಳಿಸುತ್ತಾ ಅತ್ತೆಸೊಸೆಯರ ಸ್ನೇಹಮಯಿ ಜೀವನವು ಆದರ್ಶವಾಗಿ ಹೇಗೆ ಇರಬೇಕು ಎಂಬುದನ್ನು ಚಿಕ್ಕೋಳು ಹಿರಿದಿಮವ್ವನ ಕಥನ ಗೀತೆಯಲ್ಲಿ ಅತ್ತೆ ಸೊಸೆಯರ ಅನ್ಯೋನ್ಯ ಭಾವವನ್ನು ಸ್ಪರ್ಶಿಸುತ್ತಿದೆ.

ಕಥನ ಗೀತೆಗಳಲ್ಲಿ ಹರಿಹರ ತನ್ನ ರಗಳೆಗಳಲ್ಲಿ ಶಿವ ಭಕ್ತಿಯನ್ನು ಮೆರೆದಿರುವಂತೆ ಜನಪದರು ತಮ್ಮ ಕಥನ ಕಾವ್ಯಗಳಲ್ಲಿ ಶಿವಭಕ್ತಿಯನ್ನು ಕಾಣಬಹುದು. ಹೀಗೆ ಜನಪದರು ತಮ್ಮ ಕಥನ ಗೀತೆಗಳನ್ನು ರಚಿಸಿದ್ದಾರೆ. ಕಥನ ಗೀತೆಗಳು ಪ್ರಾರಂಭದಲ್ಲಿ ಸ್ವಲ್ಪ ಮಟ್ಟಿನ ನಿಧಾನಗತಿಯಲ್ಲಿ ಮುಂದುವರೆದಂತೆ ಕಂಡು ಬಂದರೆ, ಮಧ್ಯದ ಭಾಗದಲ್ಲಿ ಅತ್ಯಂತ ಬಿರುಸಾಗಿ ಕೊನೆಯನ್ನು ಮುಟ್ಟುವಂತೆ ರಚಿಸಿದ್ದಾರೆ. ಇದು ಕಥನ ಗೀತೆಗಳ ತಂತ್ರದಂತೆ ಕಂಡುಬರುತ್ತದೆ.

ಅಧ್ಯಾಯ–3

## * ಆತ್ಮಾರ್ಪಣೆ ಕೇಂದ್ರಿತ ಜನಪದ ಗೀತೆಗಳು *

ಆತ್ಮಬಲಿ ಅಥವಾ ಆತ್ಮಹತ್ಯೆಯನ್ನು ನಾವು ಸಾಮಾನ್ಯವಾಗಿ ಇಂಗ್ಲೀಷಿನ Suicide ಎನ್ನುವುದಕ್ಕೆ ಸಂವಾದಿಯಾಗಿ ಬಳಸುತ್ತೇವೆ. ವ್ಯಕ್ತಿಯು ಯಾವುದೋ ಒಂದು ಭಾವವೇಶದ ಘಳಿಗೆಯಲ್ಲಿ ತನ್ನ ಪ್ರಾಣ ಕಳೆದುಕೊಳ್ಳುವ ಕ್ರಿಯೆಯನ್ನು ಮತ್ತು ಸಂದರ್ಭದ ಇಕ್ಕಟ್ಟಿಗೆ ಸಿಕ್ಕಾಗ ಆತ್ಮಾರ್ಪಣೆ ಮಾಡಿಕೊಳ್ಳಲೇ ಬೇಕಾದ ಪರಿಸ್ಥಿತಿಯನ್ನು ಇದು ಮುಖ್ಯವಾಗಿ ಸೂಚಿಸುತ್ತದೆ. ಆದರೆ ಆತ್ಮಬಲಿಯ ಇನ್ನೊಂದು ಪ್ರಕಾರವೂ ಇದೆ. ಈ ಪ್ರಕಾರದ ಆತ್ಮಬಲಿಯ ಘಟನೆಗಳು ಅಲೌಕಿಕವಾದ ಧಾರ್ಮಿಕ ನಂಬುಗೆಗಳಿಂದ ಪ್ರೇರಿತವಾದವುಗಳು.

ಪ್ರಾಚೀನ ಹಾಗೂ ಮಧ್ಯಕಾಲೀನ ಜಗತ್ತು ಒಂದಿಲ್ಲೊಂದು ಸಮಾಜದ ಸಂಸ್ಕೃತಿಯಲ್ಲಿ ಒಪ್ಪಿಗೆ ಹಾಗೂ ನಂಬಿಕೆಗಳ ಮೂಲಕ ಬೆಳೆದು ಬಂದಂತಹ ಆಚರಣೆಗಳಲ್ಲಿ ಈ ಆತ್ಮಬಲಿಯೂ ಕೂಡ ಪ್ರಧಾನವಾದ ಆಚರಣೆಯಾಗಿತ್ತು.[1] ಎಂಬುದನ್ನು ನಾವು ಮಾಸ್ತಿಕಲ್ಲುಗಳಿಂದ, ಕಥನ ಗೀತೆಗಳಿಂದ, ಐತಿಹ್ಯಗಳಿಂದ ತಿಳಿದುಕೊಳ್ಳಬಹುದು. ಆತ್ಮಬಲಿಯನ್ನು ಕೇಂದ್ರವನ್ನಾಗಿ ಅಥವಾ ಕಥಾವಸ್ತುವನ್ನಾಗಿ ಒಳಗೊಂಡಿರುವ ಜನಪದ ಕಥನಗೀತೆಗಳಲ್ಲಿ ಹೊನ್ನಮ್ಮ, ಕೆಂಚಮ್ಮ, ನೀಲಮ್ಮ, ಮಲ್ಲಿಗೆ ಮಾದೇವಿ, ಕೆರೆಗೆ ಹಾರ, ಹೊನ್ನಾಲಿ, ಉತ್ತರ ದೇವಿ, ನಾಗವ್ವ, ಈರೋಬಿ, ಚಿಕ್ಕೋಳು ಹಿರಿದಿಮ್ಮವ್ವ ಮುಂತಾದವುಗಳನ್ನು ನೋಡಬಹುದು.

ಈ ಕಥನ ಗೀತೆಗಳು ಹಾರವನ್ನಾಗಿಸುವುದರ ಜೊತೆಗೆ ಅಚಾರ ನಂಬಿಕೆಗಳು, ಸಂಪ್ರದಾಯಗಳು, ಆಚಾರ ವಿಚಾರಗಳು, ಒಟ್ಟಾರೆ ಅವರ ಸಂಸ್ಕೃತಿ ಯಾವ ರೀತಿಯದು ಎಂಬುದನ್ನು ನೋಡಬಹುದಾಗಿದೆ. ಹಾರವಾಗಿಸುವುದರ ಕುರಿತು ವಿರೋಧ ಭಾವಗಳು, ಬದುಕಿನ ಅನಿವಾರ್ಯ ಪರಿಸ್ಥಿಗಳು ಹೇಗೆ ನಿರೂಪಿತವಾಗಿವೆ ಎಂಬುದರ ಜೊತೆಗೆ ಅವರ ಕಥನ ಶೈಲಿ ಮುಖ್ಯವಾಗಿರುವುದನ್ನು ನೋಡಬಹುದು.

ಅಲೌಕಿಕವಾದ ಧಾರ್ಮಿಕ ನಂಬುಗೆಗಳಿಗೆ ಸಂಬಂಧಿಸಿದಂತೆ ಕೆರೆಗೆಹಾರ, ಕೆಂಚಮ್ಮ, ಹೊನ್ನಮ್ಮ, ನೀಲಮ್ಮ, ಮಲ್ಲಿಗೆ ಮಾದೇವಿ, ನಾಗವ್ವ, ಈರೋಬಿ, ಚಿಕ್ಕೋಳು ಹಿರಿದಿಮ್ಮವ್ವ, ಕಥನ ಗೀತೆಗಳನ್ನು ಕಟ್ಟಲ್ಪಟ್ಟಿದ್ದರೆ, ಹೊನ್ನಾಲಿ, ಉತ್ತರ ದೇವಿಯ ಕಥನ ಗೀತೆಗಳು ವ್ಯಕ್ತಿ ಭಾವವೇಶದ ಘಳಿಗೆಯಲ್ಲಿ ಪ್ರಾಣವನ್ನು ಕಳೆದು ಕೊಳ್ಳುವ ಬಗೆಯನ್ನು ಪ್ರಸ್ತುತ ಪಡಿಸುತ್ತವೆ.

## ಕೆರೆಗೆ ಹಾರ

ಕಲ್ಲನಕೇರಿ ಮಲ್ಲನಗೌಡ ಕೆರೆಯೊಂದ ಕಟ್ಟಿಸ್ಯಾನು
ಕೆರೆಯೊಂದ ಕಟ್ಟಿಸ್ಯಾನು ಸೆರೆಮುಕ್ಕ ನೀರಿಲ್ಲ
ಸೆರೆಮುಕ್ಕ ನೀರಿಲ್ಲ ಹೊತ್ತಿಗೆ ತೆಗಸ್ಯಾರು
ಹೊತ್ತಿಗೆ ತಗಸ್ಯಾರು ಜೋಯಿಸ ಕೇಳ್ಯಾರು[2]

ಹಳ್ಳಿಯ ಹಾಡಿನ ಒಂದು ವಿಶಿಷ್ಟ ರೀತಿಯ ಪುನರುಕ್ತಿ ಪ್ರಾರಂಭದಲ್ಲೇ ಗೋಚರವಾಗುತ್ತದೆ. ಕೆರೆಯೊಂದ ಕಟ್ಟಿಸ್ಯಾನು, ಕೆರೆಯೊಂದ ಕಟ್ಟಿಸ್ಯಾನು, ಸೆರೆಮುಕ್ಕ ನೀರಿಲ್ಲ, ಸೆರೆಮುಕ್ಕ ನೀರಿಲ್ಲ ಎಂಬುದು ಎರಡೆರಡು ಸಲ ಒಂದು ವಿಷಯವನ್ನು ಕೇಳುವವರ ಮನಸ್ಸಿನಲ್ಲಿ ಚೆನ್ನಾಗಿ ಮೂಡಿಸುವಂತ ಜಾನಪದ ಶೈಲಿಯನ್ನು ಕಾಣಬಹುದಾಗಿದೆ. ಇದಕ್ಕೆ ಕಾರಣವೇನೆಂದು ಹೊತ್ತಿಗೆ ತೆಗೆಯಿಸಿ ಪ್ರಶ್ನೆಮಾಡಿದಾಗ ಹಿರಿಸೊಸೆ ಮಲ್ಲವ್ವನ ಹಾರವ ಕೊಡಬೇಕೆಂದು ಜೋಯಿಸರು ನುಡಿಯುತ್ತಾರೆ.

ಗೌಡನ ಮನೆಯಲ್ಲಿ ಎಲ್ಲರು ಆಲೋಚನೆಗೆ ಒಳಗಾಗುತ್ತಾರೆ. ಹಿರಿಯ ಸೊಸೆಯನ್ನು ಹಾರವಾಗಿ ಕೊಟ್ಟರೆ ಹೇಗೆ? ಮನೆತನದ ಹಿರಿಯ ಸಂತತಿ ಮುಂದುವರೆಯ ಬೇಡವೇ? ಇಲ್ಲಿ ಸ್ತ್ರೀಯನ್ನೆ ಬಲಿಕೊಡುವ ಪ್ರಸಂಗ ಬಿಂಬಿತವಾಗಿರುವುದನ್ನು ಕಾಣಬಹುದು. ಇಲ್ಲಿ ಜೋತಿಷ್ಯವೇ ಕಾರಣವಾಗಿರುವುದು ಕಂಡುಬಂದಿದೆ. ಜೊತೆಗೆ ಜೋತಿಷ್ಯ ಹೇಳುವ ಪೂಜಾರಿ ಅವಳನ್ನು ಮೋಹಿಸಿದಾಗ ಅದಕ್ಕೆ ಒಳಪಡದ ಹೆಣನ್ನು ಈ ರೀತಿ ಧಾರ್ಮಿಕ ಹೆಸರಿನಲ್ಲಿ ಶೋಷಿಸುತ್ತಿರುದಾಗಿಯೂ ಕಾಣಬಹುದು. ಈ ರೀತಿ ಯಾವ ಶೋಷಣೆಗೆ ಒಳಪಡದೆ ಇದ್ದ ಸಂದರ್ಭದಲ್ಲಿ ಸ್ತ್ರೀಯ ಫಲವತ್ತತೆಯ ಕಾರಣವು ಇರಬಹುದು. ಹಿರಿಸೊಸೆಯನ್ನು ಕೊಡಲು ಸಾಧ್ಯವಿಲ್ಲ, ಆದರೆ ಬಲಿಯನ್ನಂತೂ ಕೊಡಲೇ ಬೇಕು; ಇಲ್ಲವಾದರೆ ಕೈ ಹಿಡಿದ ಧರ್ಮಕಾರ್ಯ ಕೆಟ್ಟು ಹೋಗುತ್ತದೆ.

ಕಡೆಸೊಸೆ ಭಾಗೀರತಿಯನ್ನ ಹಾರವ ಕೊಡಬೇಕೆಂದು ತೀರ್ಮಾನವಾಗುತ್ತದೆ. ಇವಳನ್ನು ಹಾರ ಕೊಡಲು ಸಂಪೂರ್ಣ ಅವರ ಮನಸ್ಸು ಇಚ್ಚಿಸುತ್ತಿದೆಯೇ? ಎಂದರೆ ಇಲ್ಲಿ ಅವರಿಗೆ ಇವಳನ್ನು ಕೊಡಲು ಮನಸ್ಸಿಲ್ಲ, ಆದರೆ ಕೊಡದೆ ವಿಧಿಯಿಲ್ಲ. ಸಮಾಜದ ಅನಿವಾರ್ಯತೆಯ ಅಂಶಗಳನ್ನು ಕಥನ ಗೀತೆಗಳಲ್ಲಿ ಕಾಣಬಹುದು. ಇದು ಇಂದಿಗೂ ಹೆಣ್ಣುಮಕ್ಕಳು ಅನುಭವಿಸುತ್ತಿರುವುದನ್ನು ನೋಡಬಹುದು. ಆದರೆ ಅದರ ರೂಪ ಬದಲಾಗಿದೆ. ಜಾಹಿರಾತುಗಳಲ್ಲಿ ಹೆಣ್ಣುಮಕ್ಕಳನ್ನು ಬಳಸಿಕೊಂಡಿರುವ ಬಗೆಯಲ್ಲಿ ಇದನ್ನು

ನೋಡಬಹುದಾಗಿದೆ. ಅವಳ ಅನಿವಾರ್ಯ ಸ್ಥಿತಿಯಲ್ಲಿ ಅಲ್ಲಿ ಸಿಲುಕಿಕೊಂಡಿರುವುದನ್ನು ನೋಡಬಹುದು.

ಸಮಾಜ ಇದನ್ನು ತಡೆಯಲು ಪ್ರಯತ್ನಿಸಿದರೂ ತಡೆಯಲಾಗದ ಪರಿಸ್ಥಿಗಳು ಹೇಗಿವೆ ಎಂಬುದನ್ನು ಕಥನ ಗೀತೆಗಳು ಪ್ರಸ್ತುತ ಪಡಿಸುವುದರಿಂದ ಕಥನ ಗೀತೆಗಳ ಪ್ರಸ್ತುತತೆಯನ್ನು ಅರಿತುಕೊಳ್ಳಬೇಕಾಗಿದೆ.

ಮನೆಯಲ್ಲಿ ಆದ ಮಾತುಕತೆ ಕೊನೆಯ ಸೊಸೆ ಭಾಗೀರಥಿಯ ಕಿವಿಗೆ ಬೀಳದಿರುತ್ತದೆಯೆ? ಅವಳ ಹತ್ತಿರ ಹಿರಿಯರು ನೇರವಾಗಿ ಪ್ರಸ್ತಾಪಿಸಿರಲಾರರು, ಇವಳೂ ಎದುರಿಗೆ ನಿಂತು ಪ್ರಶ್ನಿಸಿರಲಾರಳು ಆದರೆ ತಾನು ಜೀವ ಒಪ್ಪಿಸಿಕೊಳ್ಳಬೇಕಾದ ಸಂದರ್ಭ ಬಂದಾಗ ಮನಸ್ಸಿನಲ್ಲಿ ಕಳವಳ ಹುಟ್ಟಿ ತವರು ಮನೆಗೆ ಒಮ್ಮೆ ಹೋಗಿಬರಬೇಕೆಂಬ ವಿಷಯವನ್ನು ತಿಳಿಸಿದಾಗ ಅವರ ಅತ್ತೆ ಮಾವ ಸರ‍್ರನೆ ಹೋಗಿ ಭರ‍್ರನೆ ಬಾರವ್ವಾ ಎಂದು ಹೇಳಿ ಕಳುಹಿಸುತ್ತಾರೆ. ಇದರಿಂದ ಅವರ ಅತ್ತೆ ಮಾವ ಕೆಟ್ಟವರೇನಲ್ಲ, ಅವಳ ಹೃದಯದ ವೇದನೆಯನ್ನು ಅರಿಯಬಲ್ಲರು. ಆದರೆ ಅವರು ಏನು ಮಾಡಲಾಗದ ಸ್ಥಿತಿಯನ್ನು ಕಾಣಬಹುದು.

ಎಂದಿಲ್ಲದ ಭಾಗೀರತಿ ಇಂದ್ಯಾಕ ಬಂದವ್ವ
ಬಾಡಿದ ಮಾರ‍್ಯಾಕ ಕಣ್ಣಾಗ ನೀರ‍್ಯಾಕ?[3]

ಭಾಗೀರತಿ ತವರು ಮನೆಗೆ ಹೋದಾಗ ಅವರಪ್ಪ ಮೇಲಿನ ಸಾಲುಗಳಲ್ಲಿ ಭಾಗೀರತಿ ಬಂದ ವಿಷಯವನ್ನು ತಿಳಿಸುವಂತೆ ಕೇಳುತ್ತಾನೆ. ಭಾಗೀರತಿ ಇದ್ದ ವಿಷಯವನ್ನು ಇದ್ದಂತೆ ಹೇಳಲು ಬಾಯಿ ಬರಲಿಲ್ಲ. ಅವಳ ಮನಸ್ಸಿನ ದುಃಖದ ಪರಿಸ್ಥಿತಿ ಅವಳಿಗೆ ಹೇಳುವುದಕ್ಕೆ ಸಾಧ್ಯವಾಗದೇ ಹೋಗಿರಬಹುದು. ಆದರೆ ಅವಳ ದುಃಖಕ್ಕೆ ಕಾರಣವನ್ನು ಹೇಳಬೇಕಾಗಿದೆ. ಆದ್ದರಿಂದ ಅವಳು ನಮ್ಮ ಅತ್ತೆ ಮಾವ ನನ್ನನ್ನು ಬೇರೆ ಇಡುತ್ತಾರಂತೆ ಎಂದು ಸುಳ್ಳು ಹೇಳುತ್ತಾಳೆ. "ಇಟ್ಟರೆ ಇಡಲೇಳು ಹೊಲಮನಿ ಕೊಡತೇನು"[4] ಎಂದು ತಂದೆ ದಿಟ್ಟತನದಿಂದ ಭರವಸೆ ಕೊಡುತ್ತಾನೆ. ತಾಯಿ ಓಲೆಯ ಜೋಡನ್ನು ಕೊಡುವುದಾಗಿ, ಅಕ್ಕ ನಿನ್ನ ರಕ್ಷಣೆಗೆ ನನ್ನ ಮಕ್ಕಳನ್ನು ಕಳಿಸುವುದಾಗಿ ಒಬ್ಬೊಬ್ಬರು ಒಂದೊಂದು ರೀತಿಯ ಧೈರ್ಯದ ಮಾತುಗಳನ್ನು ಹೇಳಿ ಅವಳನ್ನು ಸಮಾಧಾನಿಸಲು ಪ್ರಯತ್ನಿಸಿದರು. ಅವಳ ಒಳ ಹೃದಯವನ್ನು ಹೊಕ್ಕು ಅದರ ತಳಮಳವನ್ನು ಅರಿಯಲು ಯಾರಿಗೂ ಸಾಧ್ಯವಾಗುವುದಿಲ್ಲ. ಅರಿತರು ಅಸಹಾಕತೆಗೆ ಬಿದ್ದವರು ಎಂಬುದನ್ನು ಬಿಂಬಿಸಿರುವ ಪ್ರಸಂಗ ಅತ್ಯಂತ ಅರ್ಥವತ್ತಾಗಿ ಚಿತ್ರಿಸಲ್ಪಟ್ಟಿದ್ದಾರೆ.

ಭಾಗೀರತಿಗೆ ತವರು ಮನೆಯಲ್ಲಿ ಸಮಾಧಾನ ದೊರೆಯಲಿಲ್ಲ. ಅವಳ ಸಮಸ್ಯೆ ಬಗೆ ಹರಿಯುವುದಿಲ್ಲ. ಅವಳು ನಂತರ ತನ್ನ ಗೆಳತಿಯನ್ನು ಕಾಣಲು ಗೆಳತಿಯ ಮನೆಗೆ ಹೋಗುತ್ತಾಳೆ. 'ಎಂದಿಲ್ಲದ ಭಾಗೀರತಿ ಇಂದ್ಯಾಕೆ ಈ ಅಳವು'[5] ಎಂದು ಗೆಳತಿ ಕೇಳುತ್ತಾಳೆ ಅದಕ್ಕೆ ಭಾಗೀರತಿ ಅಂಜುತ್ತಾ ಅಳುಕುತ್ತಾ "ಹೇಳಲೆ ಗೆಳತಿ ಹೇಳಲೆ ಗೆಳತಿ" ಎನ್ನುತ್ತಾಳೆ. ಅಂಜಬೇಡ ಗೆಳತಿ, ಅಳುಕ ಬೇಡ ಗೆಳತಿ ಎಂಬುದು ಗೆಳತಿಯ ಧೈರ್ಯದ ಆಶ್ವಾಸನೆ. ಅಕ್ಕನ ಮಾತು ಹಾಗಿರಲಿ, ತಾಯಿ ತಂದೆಗಳಲ್ಲಿ ಕೂಡ ಕಾಣದಿದ್ದ ಆತ್ಮೀಯತೆಯನ್ನು ಭಾಗೀರತಿ ಗೆಳತಿಯಲ್ಲಿ ಕಂಡಳು. ತನ್ನ ಹೃದಯವನ್ನು ಮೊದಲ ಬಾರಿಗೆ ಇವಳೆದುರಿಗೆ ತೆರೆದು, ನೇರವಾದ ಮಾತಿನಲ್ಲಿ "ನಮ್ಮತ್ತೆ ನಮ್ಮಾವ ಕೆರೆಗ್ಹಾರ ಕೊಡತಾರಂತ"[6] ಎಂದು ಇದ್ದ ವಿಷಯವನ್ನು ಇದ್ದ ಹಾಗೆ ಹೊರಗೆಡಹುತ್ತಾಳೆ. ಇವಳ ಈ ನಂಬಿಕೆಗೆ ಶ್ರದ್ಧೆಗೆ ಆ ಗೆಳತಿ ಎಷ್ಟೊಂದು ಅರ್ಹಳು. "ಕೊಟ್ಟಾರೆ ಕೊಡಳೇಳು ಇಟ್ಟಾಂಗ ಇರಬೇಕ"[7] ಎಂಬುದೇ ಅವಳ ನಿರ್ಧಾರವಾದ ಬುದ್ಧಿವಾದ. ಇದು ಕಷ್ಟ ವಚನವಾಗಿ ತೋರಬಹುದು. ಆದರೆ ಆಗಿನ ಸನ್ನಿವೇಶದಲ್ಲಿ ಅದೊಂದೆ ಭಾಗೀರತಿಗೆ ಕರ್ತವ್ಯ. ಭಾಗೀರತಿಯ ಒಳತೋಟಿಯನ್ನು ಸರಿಯಾಗಿ ಅರ್ಥಮಾಡಿಕೊಂಡವಳು ಈ ಗೆಳತಿಯೊಬ್ಬಳೆ. ದುಗುಡವನ್ನು ಅಣಗಿಸಿ ನಿಶ್ಚಯವನ್ನು ನೆಲೆಗೊಳಿಸಿ ಮುಂದಿನ ದಾರಿಯನ್ನು ಸ್ಪಷ್ಟೋಕ್ತಿಯಲ್ಲಿ ಆಕೆ ತೋರಿಸಿಕೊಟ್ಟಳು. ಗೆಳತಿಗೆ ಭಾಗೀರತಿಯಲ್ಲಿ ಅಸಾಧ್ಯವಾದ ಪ್ರೇಮವೂ, ಅವಳ ಶ್ರೇಯಸ್ಸಿನಲ್ಲಿ ಅಪರಿಮಿತವಾದ ಆಕಾಂಕ್ಷೆಯೂ ಇದ್ದ ಕಾರಣದಿಂದಲೇ ಅವಳು ಹೀಗೆ ಖಂಡಿತವಾಗಿ ಹೇಳಲು ಸಾಧ್ಯವಾಯಿತು. ಭಾಗೀರತಿಯ ಮನಸ್ಸಿನ ಹೊಯ್ದಾಟ ನಿಂತಿತು. ಬಲಿದಾನಕ್ಕಾಗಿ ಎದೆಯನ್ನು ಗಟ್ಟಿಮಾಡಿಕೊಂಡು ಈ ಸಣ್ಣಸೊಸೆ ಭಾಗೀರತಿ ಅತ್ತೆಯ ಮನೆಗೆ ಹಿಂದಿರುಗಿದಳು. ತನ್ನ ಜೀವದ ಪ್ರೀತಿಗಿಂತ ಸಮಾಜದ ಒಳಿತು ಪ್ರಧಾನವಾಗಿರುವುದನ್ನು ಇಲ್ಲಿ ನೋಡಬಹುದು.

ಅವಳನ್ನು ಹಾರವಾಗಿಸುವ ದಿನ ಗಂಗವ್ವನ ಪೂಜೆಗಾಗಿ ಏರ್ಪಾಡು ನಡೆಯುತ್ತದೆ. ಆ ದಿನ ಭಾಗೀರತಿಯ ಮನಸ್ಸು ಗಟ್ಟಿಯಾದರೂ, ಮುಂದೆ ಕಾದಿರುವ ಸಾವನ್ನು ನೆನೆದು ಕಣ್ಣೀರು ಸಹಜವಾಗಿ ಉಕ್ಕುತ್ತದೆ. ಆಕೆಯಲ್ಲಿ ಕನಿಕರಗೊಂಡು, ನೇರವಾಗಿ ಸಮಾಧಾನವೇನನ್ನೂ ಹೇಳಲರಿಯದೆ ಮಾವನು ಹೀಗೆ ಅಶಕ್ತನಾಗಿ ಮಾತಾಡುತ್ತಿದ್ದಾನೆಂದೂ, ಭಾಗೀರತಿ ಏನೋ ನೆವ ಹೇಳಿ ತನ್ನ ಮನೋದಾರ್ಢ್ಯವನ್ನು ಸ್ಥಿರಪಡಿಸಿ ಕೊಳ್ಳುತ್ತಿದ್ದಾಳೆ ಎಂದು ಕಾವ್ಯದಲ್ಲಿ ಹೇಗೆ ಕಟ್ಟಲ್ಪಟ್ಟಿದೆ ಎಂದರೆ

ಬ್ಯಾಳಿಯ ಹಸಮಾಡ್ತ ಬಿಟ್ಟಾಳು ಕಣ್ಣಿರ
ಎಂದಿಲ್ಲದ ಭಾಗೀರತಿ ಇಂದ್ಯಾಕ ಕಣ್ಣೀರು
ಬ್ಯಾಳ್ಯಾಗಿನ ಹಳ್ಳು ಬಂದು ಕಣ್ಣಾಗೆರಚಿದವು ಮಾವಾ[8]

ಬೇಳೆಯ ಒಳಗಿನ ಹರಳು ಬಂದು ಕಣ್ಣಿಗೆ ಬಿತ್ತೆಂದು ಸೊಸೆ ಮಾತನ್ನು ತೇಲಿಸುವ ಮೂಲಕ ಅವಳ ಮನಸ್ಸನ್ನು ಸ್ಥಿರಗೊಳಿಸಿಕೊಳ್ಳುತ್ತಿದ್ದಾಳೆ. ಎಲ್ಲರೂ ಗಂಗವ್ವನ ಪೂಜೆಗೆ ತಯಾರಾಗುತ್ತಿದ್ದಾರೆ. ಎಲ್ಲರೂ ಅಳುಕುತ್ತಿದ್ದಾರೆ. ಆದರೆ ಇವಳಿಗೆ ಅದು ನಿಶ್ಚಯವಾಗಿರುವುದರಿಂದ ಮುಂದೆ ಅವಳು ಅಳುಕದೆ ಸಿಂಗಾರವ ಮಾಡಿಕೊಳ್ಳುತ್ತಾಳೆ. ಎಲ್ಲರೂ ಇನ್ನೂ ಬಯಲಾಗಿಯೇ ಒಣಗಿದ್ದ ಕೆರೆಯ ಅಂಗಳದಲ್ಲಿ ಪೂಜೆಯಾಯಿತು, ಊಟವಾಯಿತು, ಪಾತ್ರೆ ಪದಾರ್ಥಗಳನ್ನು ಕಟ್ಟಿಕೊಂಡರು. ಹಿಂದಕ್ಕೆ ಹೊರಟರು. ಹೊರಟು ಬರುವಾಗ ಉದ್ದೇಶ ಪೂರ್ವಕವಾಗಿಯೇ ಇರಬೇಕು. ಬಂಗಾರದ ಬಟ್ಟಲನ್ನು ಕೆರೆಯಲ್ಲೇ ಮರೆತು ಬಿಟ್ಟರು. ಸ್ವಲ್ಪ ದೂರ ಎಲ್ಲರೂ ನಡೆದ ಮೇಲೆ ಜ್ಞಾಪಿಸಿಕೊಂಡು ಗಂಗವ್ವ ನೀ ಹೋಗ, ಗೌರವ್ವ ನೀ ಹೋಗ ಎಂದು ಒಬ್ಬೊಬ್ಬ ಸೊಸೆಗೂ ಬಟ್ಟಲನ್ನೂ ತರಲು ಹೇಳಿದರು. ಆದರೆ ಈ ದಿನ ಸೊಸೆಯರೆಲ್ಲ ಜಳಕವನ್ನು ಒಲ್ಲೆ ಎಂದಂತೆಯೇ ಈ ಕೆಲಸವನ್ನು ಒಲ್ಲದೆ ಹೋದರು.

ಸಣ್ಣಸೊಸೆ ಭಾಗೀರತಿ ನೀ ತರ ಹೋಗವ್ವ
ಸಣ್ಣ ಸೊಸೆ ಭಾಗೀರತಿ ಬಿರಿ ಬಿರಿ ನಡೆದಾಳು
ಬಿರಿ ಬಿರಿ ಹೋದಾಳು, ಬಂಗಾರ ಬಟ್ಲ ತಂಗೊಂಡಾಳು
ಒಂದು ಮೆಟ್ಲೇರುದಕ ಪಾದಕ ಬಂದಾಳು ಗಂಗಿ
ಎರಡು ಮೆಟ್ಲೇರುದಕ ಪಾದ ಮುಣಿಗಿಸ್ಯಾಳು ಗಂಗಿ
ಮೂರು ಮೆಟ್ಲೇರುದಕ ನಡುಮಟ ಬಂದಳು ಗಂಗಿ
ನಾಕು ಮೆಟ್ಲೇರುದಕ ನಡುಮಟ ಬಂದಳು ಗಂಗಿ
ಐದು ಮೆಟ್ಲೇರುದಕ ತುಂಬಿ ಹರಿದಾಳು ಗಂಗಿ
ಸಣ್ಣಸೊಸೆ ಭಾಗೀರತಿ ಕೆರಿಗ್ಹಾರವಾದಳು[9]

ಭಾಗೀರತಿ ನೀ ತರ ಹೋಗವ್ವ ಎಂದ ತಕ್ಷಣ ಭಾಗೀರತಿ ಬೇಗ ಬೇಗ ನಡೆದು ಬಂಗಾರ ಬಟ್ಲ ತೆಗೆದುಕೊಂಡು ಮೇಲೇರುತ್ತಿದ್ದಂತೆಯೇ, ಅವಳು ಕೆರೆಗೆ ಹಾರವಾಗುತ್ತಾಳೆ. ಕೆರೆ ತುಂಬಿ ಹರಿಯುತ್ತಿದೆ.

ಇಂತಹ ಸಮಯದಲ್ಲಿ ದಂಡಿಗೆ ಹೋಗಿದ್ದ ಮಾದೇವರಾಯನಿಗೆ ತನ್ನ ಮಡದಿಯ ಜಲಸಮಾಧಿಯ ವೃತ್ತಾಂತ ಕನಸ್ಸಿನ ರೂಪದಲ್ಲಿ ಅರಿವಾಯಿತು.

ಸೆಲ್ಯ ಸುಟ್ಹಾಂಗಾತು ಕೋಲು ಮುರಿದ್ಹಾಂಗಾತು
ಕಟ್ಟಿಸಿದ ಮಾಲೆಲ್ಲಾ ತಟ್ಟನೆ ಬಿದ್ಹಾಂಗಾತು[10]

ಅವನಿಗೆ ಕೆಟ್ಟ ಕನಸ್ಸು ಬಿದ್ದದ್ದು ಕಂಡು ಏನಾಯಿತೊ ಎಂದು ಆತಂಕದಿಂದ, ತವಕದಿಂದ ಬರುವ ಸಂದರ್ಭದಲ್ಲಿ ಅವನು ಬತ್ತಲೆ ಕುದುರೆ ಹತ್ತಿದ್ದು ಸ್ಪಷ್ಟಪಡಿಸುತ್ತಿದೆ.

ಮಾದೇವರಾಯ ಹಿಂದಿರುಗಿದ್ದಾನೆ. ಅವನನ್ನು ನೋಡಿ ತಾಯಿ "ಗಂಗವ್ವ ನೀರ ಕೊಡ ಗವರವ್ವ ನೀರಕೊಡ"[11] ಎಂದು ಹೇಳಿದ್ದನ್ನು ನೋಡಿ ಮಾದೇವರಾಯ ಇವರೇಕೆ ನೀರು ಕೊಡುತ್ತಾರೆ. ನನ್ನ ಮಡದಿ ಭಾಗೀರತಿ ಎಲ್ಲಿಗೆ ಹೋಗವಳವ್ವ ಎಂದು ಕೇಳುತ್ತಾನೆ. ಅವನಿಗೆ ನಡೆದ ಸಂಗತಿಯನ್ನು ಹೇಳಲು ಧೈರ್ಯವಾಗುವುದಿಲ್ಲ. ನಿನ್ನ ಮಡದಿ ಭಾಗೀರತಿ ತವರಿಗೆ ಹೋಗ್ಯಾಳಪ್ಪ ಎಂದು ಹೇಳಿದಳು.

ಮಾದೇವರಾಯ ಹಾಗಿಂದ ಹಾಗೆಯೇ ಬತ್ತಲ ಕುದುರೆ ಮೇಲೆ ಅತ್ತೆಯ ಮನೆಗೆ ಹೋದನು. ಅಲ್ಲಿ ನೀರು ಕೊಡಲು ನಿಂಬೆವ್ವ ನೀಲವ್ವರಿಗೆ ಅತ್ತೆ ಹೇಳಿದಳು. ನನ್ನ ಮಡದಿ ಭಾಗೀರತಿ ಎಲ್ಲಿ ಎಂದು ಹಿಂದಿನಂತೆ ಇಲ್ಲೂ ಅಳಿಯ ಕೇಳಿದ್ದಕ್ಕೆ ನಿನ್ನ ಮಡದಿ ಭಾಗೀರತಿ ಗೆಳತಿಯ ಮನೆಗೆ ಹೋಗ್ಯಾಳಪ್ಪ ಎಂದು ಅತ್ತೆಯಿಂದ ಉತ್ತರ ಬಂದಿತು. ಸರಿ ಗೆಳತಿಯ ಮನೆಯಲ್ಲಿ ಹೋಗಿ ಕೇಳುತ್ತಾನೆ. ಆಗ ಭಾಗೀರತಿಯ ಅತ್ತೆಗಾಗಲಿ, ತಾಯಿಗಾಗಲಿ ಇಲ್ಲದ ಧೈರ್ಯದಿಂದ ಸರಳತೆಯಿಂದ ಗೆಳತಿ ಉತ್ತರ ಕೊಡುತ್ತಾಳೆ.

ನಿನ್ನ ಮಡದಿ ಭಾಗೀರತಿಯ ಏನು ಹೇಳಲಿ
ನಿಮ್ಮಪ್ಪ ನಿಮ್ಮವ್ವ ಕೆರಿಗ್ಹಾರ ಕೊಟ್ಟರಂತ[12]

ಅವನ ಸಂದೇಹ ದೃಢವಾಯಿತು. ಆಗ ಮಾದೇವರಾಯ ಕೆರೆಯ ಬಳಿ ಬರುತ್ತಾನೆ.

ಗಂಡ ಮಾದೇವರಾಯ ಹತ್ತಿದ ಬತ್ತಲೆಗುದುರೆ
ಹತ್ತಿದ ಬತ್ತಲೆಗುದರಿ ಹೊಂಟಾನು ಹೌಹಾರಿ
ಕೆರೆಯ ದಂಡೆಗೆ ಬಂದು ಕಣ್ಣೀರು ಇಟ್ಟಾನು
ಕಣ್ಣೀರು ಇಟ್ಟಾನು ನಿಟ್ಟುಸಿರು ಬಿಟ್ಟಾನು
ಸಾವಿರ ವರಹ ಕೊಟ್ಟರು ಸಿಗಲಾರದ ಸತಿ ನೀನು
ಸಿಗಲಾರದ ಸತಿ ನೀನು ನನ್ನ ಬಿಟ್ಟು ಎಲ್ಲಿ ಹೋದೆ
ಮುನ್ನೂರು ವರಹಾ ಕೊಟ್ಟು ಮುತ್ತಿನೊಲೆ ಮಾಡಿಸಿದ್ದೆ
ಮುತ್ತಿನೋಲೆ ಇಟಗೊಳ್ಳೊ ಮುತ್ತೈದೆ ಎಲ್ಲಿಗ್ಹೋದೆ
ಇಷ್ಟು ಮಾತಾಡಿ ಮಾದೇವ ಬಿಟ್ಟಾನು ಕಣ್ಣೀರು
ಬಿಟ್ಟಾನು ಕಣ್ಣೀರ ಹಾರಿದ ಕೆರೆ ನೀರಾಗ[13]

ಭಾಗೀರತಿ ಸಮಾಜದ ಒಳತಿಗಾಗಿ ಕೆರೆಗೆ ಹಾರವಾದರೆ ಅವಳ ಗಂಡ ಮಾದೇವರಾಯ ಅವಳನ್ನು ಕಳೆದುಕೊಂಡ, ಭಾವಾವೇಶಕ್ಕೆ ಒಳಗಾಗಿ ಆತ್ಮಹತ್ಯೆಯನ್ನು ಮಾಡಿಕೊಂಡ ಅಂಶಗಳು ಇಲ್ಲಿ ವ್ಯಕ್ತವಾಗಿದೆ.

## ಹೊನ್ನಮ್ಮ

ಹೊನ್ನಮ್ಮ ಮಲ್ಲಣ್ಣ ಗೌಡನ ಹೆಂಡತಿ (ಮಲ್ಲಣ್ಣ ಗೌಡ ಮತ್ತು ಲಿಂಗಣ್ಣ ಗೌಡರಿಬ್ಬರು ಅಣ್ಣತಮ್ಮಂದಿರು) ಇಬ್ಬರು ಘಟ್ಟಕ್ಕೆ ಹೋಗುವುದಕ್ಕೆ ಮಾತನಾಡಿಕೊಂಡು ಎಲ್ಲ ಸಿದ್ಧತೆಗಳನ್ನು ಮಾಡಿಸಿಕೊಳ್ಳುತ್ತಾರೆ. ಹೊನ್ನಮ್ಮ ರೊಟ್ಟಿ ಸುಡಲು ಹೋದಾಗ ರೊಟ್ಟಿ ಎರಡು ಪಾಲಾಗುತ್ತೆ. ಬುತ್ತಿ ಕಟ್ಟುತ್ತಾಳೆ, ಬುತ್ತಿಯೂ ಎರಡು ಪಾಲಾಗುತ್ತೆ. ಒಟ್ಟಿನಲ್ಲಿ ಅಪಶಕುನವಾದದ್ದನ್ನು ನೋಡಬಹುದು. ಆಗ ಹೊನ್ನಮ್ಮ ದುಃಖ ಪಡುತ್ತಾಳೆ. ಗಂಡನಿಗೆ ಹೋಗುವುದು ಬೇಡವೆನಿಸಿದರೂ, ತಮ್ಮನನ್ನು ಒಂಟಿಯಾಗಿ ಘಟ್ಟಕ್ಕೆ ಕಳುಹಿಸಲು ಇಷ್ಟವಿರುವುದಿಲ್ಲ.

ನಿನ್ನೊಬ್ಬನನ್ನೆ ಘಟಕ್ಕೆ ಕಳಿಸೀ ನಾನಿರಬೇಕ[14] ಎಂಬ ಸಾಲಿನಲ್ಲಿ ಅವನ ಮನಸ್ಥಿತಿಯನ್ನು ನೋಡಬಹುದು. ಅವನು ಹೆಂಡತಿಯನ್ನು ನಾನ್ಹೋಗಲೆ ಬಿಡಲೇನೆ[15] ಹಂಗಂದು ಮಲ್ಲಣ್ಣಗೌಡ ಹೆಂಡತಿಯ ಕೇಳುತ್ತಾನೆ. ಆಗ ಅವಳು ಸುಖದಿಂದ ನೀವ್ಹೋಗಿ ಬನ್ನಿ ಎಂದು ಹೇಳಿ ದುಃಖವ ಮಾಡುತ್ತಾಳೆ. ಆದರೆ ಅವಳಿಗೆ ಕಳುಹಿಸಲು ಇಷ್ಟವಿಲ್ಲ. ಆದರೆ ಅವನು ಹೊರಟು ನಿಂತಿದ್ದಾನೆ ತಡೆಯಲು ಸಾಧ್ಯವಿಲ್ಲ.

ಮಲ್ಲಣ್ಣಗೌಡ ಹೋಗುವಾಗ ತಂದೆ ತಾಯಿಗಳಿಗೆ ತಮ್ಮ ಸೊಸೆಯನ್ನು ಚೆನ್ನಾಗಿ ನೋಡಿಕೊಳ್ಳುವುದಾಗಿ ತಿಳಿಸಿ ಹೋಗುತ್ತಾನೆ. ಅವರು ಹೋಗಿ ಏಳು ಎಂಟು ದಿನಗಳ ಒಳಗೆ ಕೆರೆಕಟ್ಟೆ ಹಿಂಗಿ ಹೋಗುತ್ತದೆ. ಇದರಿಂದ ಹಕ್ಕಿ ಪಕ್ಷಿಗಳಿಗೆ ದನ ಕರುಗಳಿಗೆ ನೀರು ಇಲ್ಲ ಎಂದು ಮಲ್ಲಣಗೌಡನ ಅಪ್ಪ ಮಾರಪ್ಪಗೌಡ ಕೆರೆ ಕಟ್ಟಿಸಬೇಕೆಂದು ಯೋಚಿಸಿ, ವಡ್ಡದಾಸರ ಬಾಯಿಗೆ ಕಾಗದವನ್ನು ಬರೆದು ಅವರನ್ನು ಕರೆಯಿಸುತ್ತಾನೆ. ಕೆರೆ ಕಟ್ಟುವ ವಿಚಾರವನ್ನು ತಿಳಿಸಿ ಒಪ್ಪಂದವನ್ನು ಮಾಡಿಕೊಳ್ಳುತ್ತಾನೆ. ಒಪ್ಪಂದದಂತೆ ವಡ್ಡರು ಕೆರೆಯನ್ನು ಕಟ್ಟುತ್ತಾರೆ. ಆದರೆ ಕೆರೆಗೆ ನೀರು ಬರುವುದಿಲ್ಲ. ಅವರೆಲ್ಲ ಎಂತ ಸತ್ಯವಂತನು ಕೆರೆಯನ್ನು ಕಟ್ಟಿಸಿದನಪ್ಪ ಎಂದು ಅಂದುಕೊಳ್ಳುತ್ತಾರೆ. ಮಲ್ಲಣ್ಣಗೌಡ ಅವಮಾನಿತನಾಗುತ್ತಾನೆ. ಅವನು ಕೊರವಂಜಿ ಮನೆಗೆ ಹೋಗಿ ಶಾಸ್ತ್ರಾವ ಕೇಳುತ್ತಾನೆ.

ಶಾಸ್ತ್ರಾವ ಕೇಳಿದಾಗ ನಿಮ್ಮ ಕಿರುಬೆಟ್ಟ ಬೇಡ್ತಾದೆ ಎಂದು ಹೇಳುತ್ತಾನೆ. ಆದರೆ ಅವನು ಕೊಡಲು ಇಷ್ಟಪಡುವುದಿಲ್ಲ. ಎಲ್ಲರು ನನ್ನನ್ನು ಮೋಟು ಮಾರಪ್ಪಗೌಡಾಂತ ಕರೆಯುತ್ತಾರೆ. ನೀ ಮತ್ತೊಂದು ಮಾತೇಳು ಎಂದಾಗ ಅವನ ಹೆಂಡತಿಯನ್ನು ಬೇಡ್ತಾದೆ. ಆಗಲೂ ಅವನು ಹೆಗ್ಗಡತನಕೆ ಯಾರಿಲ್ಲ, ನೀನು ಇನ್ನೊಂದು ಮಾತೇಳು ಎಂದಾಗ, ನಿಮ್ಮ ದನಗೋಗ ಮಗನನ್ನು ಬೇಡುತ್ತದೆ. ಮಗನನ್ನು ಕೊಟ್ಟರೆ ದನ ಕಾಯುವವರಿಲ್ಲ

ನೀನಿ ಮತ್ತೊಂದು ಮಾತೇಳು ಎಂದಾಗ ಗೌಡಾರೆ ಗೌಡಾರೆ ನಿಮ್ಮ ಸೊಸೆ ಹೊನ್ನಮ್ಮನ ಬೇಡ್ತಾದೆ ಗೌಡಾರೆ ಎಂದು ಹೇಳಿದಾಗ ಅವನು ಆ ಮಾತು ಕೇಳಿಕೊಂಡು ಅರಮನೆಗೆ ಬಂದು ಮಲಗಿರುತ್ತಾನೆ. ಸೊಸೆ ಹೊನ್ನಮ್ಮ ಹೋಗಿ ಮಾವ ಹೀಗೇಕೆ ಮಲಗಿದ್ದೀರಾ ಎದ್ದೇಳಿ ಎಂದು ಹೇಳಿದಾಗ, ನಿನ್ನ ಹತ್ತಿರ ಹೇಳಿದರೆ ಹರಿಸೀಯ, ತೀರಿಸೀಯ ಎಂದು ಕೇಳಿದಾಗ ಅವಳು ಹೇಳುವ ಉತ್ತರ ಆಗುವ ಹಾಗಿದ್ರೆ ಮಾಡುತ್ತೀನಿ. ನೀವೇಳಿ ಊಟವ ಮಾಡೇಳಿ ಎಂದು ಮಾವನಿಗೆ ಹೇಳುತ್ತಾಳೆ. ನಿಸ್ವಾರ್ಥಿಯಾದ ಸೊಸೆಯ ಗುಣವನ್ನು ಹೇಗೆ ಬಳಸಿಕೊಳ್ಳುತ್ತಾರೆ ಎಂಬುದನ್ನು ಕಾಣಬಹುದು.

ಮಾವ, ನಾನು ಎಲ್ಲರಿಗೂ ಒಳ್ಳೆದಾಗಲಿ ಅಂತ ಕೆರೆಯನ್ನ ಕಟ್ಟಿಸಿದರೆ ಕೆರೆಗೆ ನೀರೆ ಬರಲಿಲ್ಲ. ಹೊಸಕೆರೆ ಮೂಲೆಗೆ ನಿನ್ನ ಹಾರವ ಬೇಡ್ತಾದೆ ಎಂದು ಹೇಳಿದಾಗ ಅವಳು ಯಾವುದೇ ರೀತಿಯ ಅಳುಕನ್ನಾಗಲಿ ವ್ಯಕ್ತಪಡಿಸುವುದಿಲ್ಲ. ಅದಕ್ಕೆ ಬದಲಾಗಿ ನನಗೆ ಸೀರೆ ರವಿಕೆ ಬಂಗಾರ, ಮುತ್ತೈದೆಯರು ಆಗಬೇಕು ಮಾವಯ್ಯ ಎಲ್ಲವು ಸಿದ್ಧಮಾಡಿಕೊಳ್ಳಿ. ನಾನು ತವರಿಗೋಗಿ ಬರುತ್ತೇನೆ ಎಂದು ತವರು ಮನೆಗೆ ಹೋಗುತ್ತಾಳೆ.

ಹೋಗುವ ಮುಂಚೆ ಮಗುವಿಗೆ ಹಾಲನ್ನು ಕಾಯಿಸಿ ತನ್ನ ತಂದೆ ಬರೋವರೆಗೂ ಅಳಬ್ಯಾಡ ಎಂದು ಸಾಪಾವ ಇಡುತ್ತಾಳೆ. ತವರಿಗೆ ಹೋಗಿ ತಂದೆ, ತಾಯಿ, ಅಣ್ಣ, ಅತ್ತಿಗೆಯರನ್ನು ಕೂರಿಸಿಕೊಂಡು ತನ್ನನ್ನ ಹಾರ ಕೊಡುವ ವಿಷಯವನ್ನು ತಿಳಿಸುತ್ತಾಳೆ. ಅವರೆಲ್ಲರು ನಿನ್ನ ಗಂಡನು ಬರುವತನಕ ಇಲ್ಲಯೇ ಇರಬೇಕು ಎಂದು ಎಲ್ಲರು ಹೇಳಿದರು ಅವರು ಹೇಳಿದ ಮಾತನ್ನೆಲ್ಲಾ ತಿರಸ್ಕರಿಸುತ್ತಾಳೆ. ತನ್ನ ಮಾವನಿಗೆ ಭಾಷೆ ಕೊಟ್ಟಿರುವುದಾಗಿ, ಕೊಟ್ಟ ಮಾತಿಗೆ ತಪ್ಪುವುದಿಲ್ಲ. ನೀವೆಲ್ಲ ಅಪ್ಪಣೆ ಕೊಡಬೇಕು ಅವರು ಮಗಳ ಪರಿಸ್ಥಿಯ ಬಗ್ಗೆ ದುಃಖವನ್ನು ಪಡುತ್ತಾರೆ. ಸ್ವತಃ ಅವಳೆ ಅವರನ್ನೆಲ್ಲಾ ಸಮಾಧಾನಪಡಿಸುತ್ತಾಳೆ. ಹಿಂದಿರುಗಿ ಬರುವ ಸಮಯಕ್ಕೆ ಎಲ್ಲರೂ ಪೂಜೆ ಸಾಮಾನುಗಳನ್ನು ಇಟುಕೊಂಡು ಕಾಯುತ್ತಿರುತ್ತಾರೆ. ಅವಳು ಪೂಜೆ ಸಾಮಾನುಗಳನ್ನು ತೆಗೆದುಕೊಂಡು ಕೆರೆಗೆ ಇಳಿಯುತ್ತಾಳೆ. ಇಳಿಯುತ್ತಿದಂತೆ ನೀರು ಉಕ್ಕುತ್ತದೆ. ಅವಳು ಅವರ ಮಾವನಿಗೆ ಒಂದೊಂದೇ ಹಂತಕ್ಕೆ ಬಂದು ಅವಳು ಮುಳುಗಿ ಹೋದದನ್ನು ತಿಳಿಸುತ್ತಾಳೆ.

ಈ ವಿಷಯ ಅವಳ ಗಂಡನಿಗೆ ಕನಸ್ಸಿನ ರೂಪದಲ್ಲಿ ಗೋಚರವಾಗುತ್ತದೆ. ಊರಿಗೆ ಹಿಂದಿರುಗುತ್ತಾನೆ. ಮನೆಯಲ್ಲಿ ಹೆಂಡತಿ ಕಾಣಿಸುವುದಿಲ್ಲ. ತಾಯಿಯನ್ನು ಕೇಳಿದಕ್ಕೆ ನೀರಿಗಂತ ಹೋದವಳು ಬರಲಿಲ್ಲ ಎಂದು ಉತ್ತರಿಸುತ್ತಾಳೆ.

ಮಲ್ಲಣ್ಣಗೌಡ ತೊಟ್ಟಿಲ್ಲನ್ನು ಎತ್ತಿಕೊಂಡು ಕೆರೆಯ ಹತ್ತಿರ ಹೋಗಿ "ಮಗುವಾನೆ ಕೊಡುತ್ತೀನಿ ಮೊಕವನೆ ತೋರಿಸೆಣ್ಣೆ"[16] ಎಂದು ದುಃಖ ಪಡುತ್ತಾನೆ. ನಂತರ ಅವನು

ಅಲ್ಲಿಯೆ ಕಲ್ಲಾಗಿ ಹೋಗುತ್ತಾನೆ. ಆ ಕೆರೆಗೆ ಹೊನ್ನಮ್ಮನ ಕೆರೆಯೆಂದು, ಅವನು ಕಲ್ಲಾಗಿ ಹೋದದ್ದನ್ನು ಈರಣ್ಣನ ಗುಡಿಯೆಂದು ಜನ ಕರೆಯುತ್ತಾರೆ ಎಂದು ಕಥೆಯನ್ನು ಮುಗಿಸುತ್ತಾರೆ.

ಕೆಂಚಮ್ಮ ಕಥನ ಗೀತೆಯು ಅವಳ ಬಸುರಿಯಿಂದ ಪ್ರಾರಂಭವಾಗಿದೆ. ಇಲ್ಲಿ ಅವಳ ಗಂಡನ ಮನೆಯವರು ಇವಳ ಬಗ್ಗೆ ತೋರುವ ಕಾಳಜಿಗಳನ್ನೆಲ್ಲಾ ಚಿತ್ರಿಸಲಾಗಿದೆ. ಹೆರಿಗೆಯ ಸಂದರ್ಭದಲ್ಲಿ ಸ್ವತಃ ಮಾವನೇ ಸೂಲಗಿತ್ತಿಯರ ಮನೆಗಳಿಗೆ ಹೋಗಿ ತನ್ನ ಸೊಸೆ ಮಗುವನ್ನು ಉಳಿಸು. ನೀವು ಕೇಳಿದ ಕಾಣಿಕೆಯನ್ನು ಕೊಡುವುದಾಗಿ ಕಂಡುಬರುತ್ತದೆ. ಕೆಂಚಮ್ಮನ ಕಥನ ಗೀತೆಯಲ್ಲಿ ಗಂಡ ದಂಡಿಗೆ ಹೋಗಿರುವುದಿಲ್ಲ. ಅವನು ಸಹ ಅವಳ ಜೊತೆಯಲ್ಲಿಯೆ ಇರುವುದನ್ನು ಕಾಣಬಹುದು.

ಕೆಂಚಮ್ಮನ ಬಾಡಿದ ಮುಖ ನೋಡಿ ಕೆಂಚಮ್ಮನ ಗಂಡ ತನ್ನ ಹೆಂಡತಿಯನ್ನು ವಿಚಾರಿಸುವ ಬಗ್ಗೆಯನ್ನು ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಇಂದ್ಯಾಕ ನಿನ ಮೊಕಬಾಡಿ ಕೆಂಚವ್ವ
ನಿನಗ್ಯಾರೆ ಕುಂದು ನುಡಿದೋರು[17]

ಕೆಂಚಮ್ಮನ ಗಂಡ ಅವಳಿಗೆ ಆಸರೆಯಾಗಿದ್ದ ಎಂಬುದನ್ನು ತಿಳಿಸುತ್ತದೆ. ಅವಳು ಗಂಗೆಯ ಪಾಲಾದ ಪ್ರಸಂಗ ಗೋಪ್ಯವಾಗಿ ನಡೆದು ಹೋಗದೆ ಎಲ್ಲರ ಎದುರಿನಲ್ಲೇ ಜರುಗುತ್ತದೆ. ಕೂಡಿದ ಪತಿಯ ಸಮ್ಮುಖದಲ್ಲಿ, ಹೆತ್ತತಾಯಿಯ ಕಣ್ಣೆದುರಿನಲ್ಲೇ, ಅತ್ತೆಮಾವಂದಿರ ಸಾನಿಧ್ಯದಲ್ಲೇ ಕೆಂಚಮ್ಮ ಗಂಗೆಯನ್ನು ಸೇರುತ್ತಾಳೆ. ಆದರೆ ಯಾರೂ ತಡೆಯಲಾಗದ ಪರಿಸ್ಥಿತಿಯ ನಿರ್ಮಾಣದಲ್ಲಿ ಆತ್ಮಾರ್ಪಣೆ ನಡೆಯುವ ಬಗ್ಗೆಯೆ ಇಲ್ಲಿ ಮುಖ್ಯವಾಗಿರುವುದು.

ಕೆಂಚಮ್ಮನ ಕಥನ ಗೀತೆಯಲ್ಲಿ, ಅವಳಿಗೆ ಉತ್ತರಿಸುವ ಸ್ವಾತಂತ್ರ್ಯವಿತ್ತು ಎಂಬುದನ್ನು ಕಾಣಬಹುದಾಗಿದೆ. ಕೆಂಚಮ್ಮನ ಗಂಡ "ನಾರಿ ಕಂದನ ಹಡೆದು ನಾಳಿಗೆ ತಿಂಗಳಾದೊ ನಾರಿ ನನ ಮಂಚಕೆ ದಯಮಾಡೆ"[18] ಎಂದು ಅವಳ ಗಂಡ ನುಡಿದದ್ದಕ್ಕೆ ಕೆಂಚಮ್ಮ "ಆ ಹೆಚ್ಚು ಮಾತ ಈಗ ಆಡಬೇಡಿ ರಾಯೋರೆ ತಪ್ಪಿದ್ರೆ ನಂದೊಂದು ತಬಸಯ್ಯೊ ರಾಯರೆ"[19] ಅವಳು ಗಂಡನ ಮಾತನ್ನು ನಿರಾಕರಿಸುತ್ತಿದ್ದಾಳೆ. ಅದು ಹೇಗೆ ಕ್ಷಮೆ ಕೇಳುವ ರೀತಿಯಲ್ಲಿ (ಇಲ್ಲಿಯೇ ಜಾನಪದ ಸಾಹಿತ್ಯ ಮುಖ್ಯವಾದದ್ದು). ಇಲ್ಲಿ ಗಂಡ ಹೆಂಡ್ತಿರ ಅನ್ಯೋನ್ಯತೆ ಕಂಡುಬರುತ್ತದೆ. ಗಂಡನೇ ಬೇಡ ಎಂದರು ಅವಳು ಕೊಟ್ಟ ಮಾತಿಗೆ ತಪ್ಪಿ ನಡೆಯುವಳಲ್ಲ ಎಂಬ ರೀತಿಯಲ್ಲಿ ಕಥನ ಕಾವ್ಯಗಳು ರಚಿತವಾಗಿವೆ.

ಮಲ್ಲಿಗೆ ಮಾದೇವಿ ಮತ್ತು ನೀಲಮ್ಮ ಕಥನ ಗೀತೆಯೂ ಅಲ್ಪ ಸ್ವಲ್ಪ ಬದಲಾವಣೆಗಳಿದ್ದರೂ, ಕಥೆ ಒಂದೇ ರೀತಿಯಾಗಿದೆ. ಈ ಎಲ್ಲಾ ಕಥನ ಗೀತೆಗಳು ಗ್ರಾಮಗಳಿಗೆ ಒಳಿತು ಆಗುವ ಸನ್ನಿವೇಶವನ್ನು ಚಿತ್ರಿಸುತ್ತಿರುವ ಕಥನ ಕಾವ್ಯಗಳಾಗಿ, ಊರಿನ ಹಿತಕ್ಕಾಗಿ, ನಾಡಿನ ಕ್ಷೇಮಕ್ಕಾಗಿ, ಕೆಲಸಗಳನ್ನು ಕೈಗೊಂಡಾಗ ತೊಂದರೆಗಳು ಒದುಗುವುದು ಸಹಜ. ದನಕರುಗಳಿಗೂ, ಪೈರುಪಚ್ಚೆಗಳಿಗೂ ನೀರು ಒದಗಲೆಂದು ಬಲುವೆಚ್ಚದಿಂದ ಕೆರೆಯನ್ನು ಕಟ್ಟಿಸಿದರೆ ನೀರೆ ಬೀಳದಿರಬಹುದು. ಪ್ರಜೆಗಳು ಸುರಕ್ಷಿತವಾಗಿರಲೆಂದು ಕೋಟೆಯನ್ನು ಎಬ್ಬಿಸಿದರೆ ಗೋಡೆಯೆ ಭದ್ರವಾಗಿ ನಿಲ್ಲದಿರಬಹುದು. ಇಂಥ ಸಂದರ್ಭದಲ್ಲಿ ನಮ್ಮ ಹಿಂದಿನವರು ಇಲ್ಲೇನೋ ದೈವಿಕವಾದ ಕಾರಣವಿರಬೇಕೆಂದು ನಂಬಿ ಜೋಯಿಸರನ್ನು ವಿಚಾರಿಸುತ್ತಿದ್ದರು. ಊರಿನ ಹಿತಕ್ಕಾಗಿ ಆಗಿನ ಬಲ್ಲವರು ಹೇಳಿದ ತ್ಯಾಗಕಾರ್ಯವನ್ನು ಅದು ಎಷ್ಟೇ ಕಠಿಣವಾಗಿದ್ದರೂ ಕೈಗೊಳ್ಳಲು ಅವರು ಹಿಂದೆ ಮುಂದೆ ನೋಡುತ್ತಿರಲ್ಲಿಲ್ಲ ಎಂಬ ರೀತಿಯಲ್ಲಿ ಕಟ್ಟಲ್ಪಟ್ಟಿವೆ.

ಬಲಿದಾನದ ಸಂದರ್ಭಗಳಲ್ಲಿ, ಪುರುಷರ ದಬ್ಬಾಳಿಕೆ ಒಂದು ರೀತಿಯಲ್ಲಿ ಕಂಡುಬಂದರೂ ಅದೇ ಸಂಪೂರ್ಣ ಸತ್ಯವಾಗಿರುವುದಿಲ್ಲ. ಹೊನ್ನಮ್ಮನ ಕಥನ ಗೀತೆಯಲ್ಲಿ ಅವರ ಮಾವ ಹೆಂಡತಿಯನ್ನು, ಮಗನನ್ನು, ಅವನನ್ನು ಕೇಳಿದಾಗ ಮತ್ತೊಂದು ಮಾತನ್ನೇಳು ಕೊರವಂಜಿ ಎಂದು ಕೇಳುತ್ತಾನೆ. ಈ ನಿಟ್ಟಿನಲ್ಲಿ ನಾವು ಶೋಷಣೆ ಎಂದು ಪರಿಗಣಿಸಬಹುದು. ಕೆಂಚಮ್ಮನ ಕಥನ ಗೀತೆಯಲ್ಲಿ ಅವಳು ಹಾರವಾಗುವುದನ್ನು ತಪ್ಪಿಸಲು

ನಿನ ಮುಡದ ಮ್ಯಾಲೆ ಮಗುಚಿ ಮುಡಿಯೊದೆಂಗೆ
ನಿನಮ್ಯಾಗಳ ಸವತಿ ತರೊದೆಂಗೆ ಎಂದೀಗ
ಪತಿರಾಯ ನೊಂದು ನುಡುದಾನು[20]

ಅದೇ ರೀತಿ ಕೆಂಚಮ್ಮನ ಮಾವನಿಗಾಗಲಿ, ಭಾಗೀರತಿಯ ಅತ್ತೆ ಮಾವನಿಗಾಗಲಿ ಸಂಪೂರ್ಣ ಒಪ್ಪಿಗೆ ನೀಡುತ್ತಿಲ್ಲ. ಅವರೂ ದುಃಖವನ್ನು ಅನುಭವಿಸುತ್ತಿದ್ದಾರೆ. ತವರು ಮನೆಯವರು ಮತ್ತೊಂದು ರೀತಿಯಲ್ಲಿ ತಡೆಯುತ್ತಿದ್ದಾರೆ. ಎಲ್ಲರ ಆಸರೆ, ಪ್ರೀತಿಗಳಿದ್ದರೂ, ಕಠಿಣವಾಗಿ ತಡೆಯಲು ಆಗಲು ಆಗದಿರುವ ಅನಿವಾರ್ಯದ ಪರಿಸ್ಥಿಗಳು ನಿರ್ಮಾಣವಾದಾಗ ಮನುಷ್ಯ ಆತ್ಮಹತ್ಯೆ ಮಾಡಿಕೊಳ್ಳುವ ಪರಿಸ್ಥಿತಿಗಳನ್ನು ಚಿತ್ರಿಸುತ್ತಿರುವುದನ್ನು ಕಾಣಬಹುದು. ಇಲ್ಲಿ ಕೇವಲ ಶೋಷಣೆಯಷ್ಟೆ ಚಿತ್ರಿತವಾಗಿಲ್ಲ. ಬದುಕಿನ ಅನಿವಾರ್ಯ ಪರಿಸ್ಥಿತಿಗಳನ್ನು ಚಿತ್ರಿಸುತ್ತಿವೆ. ಇಂತಹ ಪರಿಸ್ಥಿತಿಯಲ್ಲಿ ಅವಳು ತನ್ನ ಬದುಕಿಗಿಂತಲೂ ನಾಡಿನ ಜನರ ಬದುಕೇ ಮುಖ್ಯವಾಗುತ್ತದೆ. ಸೈನಿಕ ಯುದ್ಧದ ಸಮಯದಲ್ಲಿ ಅವನ ಜೀವ ಹೋಗುತ್ತದೆ ಎಂದು ತಿಳಿದಿದ್ದರೂ ನಾಡಿನ ಕ್ಷೇಮಕ್ಕಾಗಿ ತನ್ನ ಜೀವವನ್ನು ಮುಡಿಪಾಗಿಸುವುದು. ಅದೇ ರೀತಿ ಇಲ್ಲಿನ ಸ್ತ್ರೀಯರು ತಮ್ಮ

ಜೀವನವನ್ನು ನಾಡಿನ ಹಿತಕ್ಕಾಗಿ ಮುಡಿಪಾಗಿಸುವುದರಿಂದಲೆ ಅವರನ್ನು ಜಾನಪದರು ಇಂದಿಗೂ ಅವರನ್ನು ಕಥನ ಗೀತೆಗಳ ಮೂಲಕ ಅವರನ್ನು ಕುರಿತು ಹಾಡುವುದು ಮುಖ್ಯವಾಗುತ್ತದೆ.

ಇಲ್ಲಿ ಸಾಮಾನ್ಯ ಕುಟುಂಬದ ಸ್ತ್ರೀಯನ್ನು ಹಾರವಾಗಿಸುತ್ತಿಲ್ಲ. ಊರಿನ ಗೌಡನ ಮನೆಯ ಸ್ತ್ರೀಯನ್ನು ಹಾರವಾಗಿಸುವಂತಹದ್ದು. ಇಲ್ಲಿ ಎರಡು ರೀತಿಯಲ್ಲಿ ಅರ್ಥಮಾಡಿಕೊಳ್ಳಬಹುದು. ಸ್ತ್ರೀಯರ ಶೋಷಣೆ ಎಲ್ಲಾ ವರ್ಗಗಳಲ್ಲಿಯೂ ಇರುವುದನ್ನು ಕಾಣಬಹುದು. ಈ ಎಲ್ಲಾ ಕಥನ ಗೀತೆಗಳು ಎಲ್ಲೂ ಬಲವಂತ ಪಡಿಸುತ್ತಿಲ್ಲ. ಅವಳು ತವರು ಮನೆಗೆ ಹೋಗಿ ಬರುತ್ತೇನೆ ಎಂದಾಗ ಅವರು ತಡೆಯುವುದಿಲ್ಲ. ಬಲವಂತಿಸುವಂತಿದ್ದರೆ ಅವಳನ್ನು ತವರಿಗೂ ಕಳುಹಿಸುತ್ತಿರಲ್ಲ. ಎಲ್ಲರೂ ತಡೆದರು ಅವಳು ಅವಳು ಅವಳು ಬಲಿಯಾಗುವುದು ಅವಳ ಧೈರ್ಯ, ಉದಾರತೆಗಳನ್ನು ಗುರುತಿಸಬಹುದು.

ಮನುಷ್ಯನ ಬದುಕಿನ ಇಕ್ಕಟ್ಟಿನ ಪರಿಸ್ಥಿತಿಗಳನ್ನು ಚಿತ್ರಿಸುತ್ತಿರುವುದನ್ನು, ಅಂದರೆ ಅತ್ತೆ ಮಾವನಿಗೆ ನೀನು ಹಾರವಾಗುವುದು ಬೇಡ ಎಂದು ಹೇಳಲು ಯಾರಿಗೂ ಆಗುವುದಿಲ್ಲ ಕೊನೆಯಲ್ಲಿ ಅವಳ ಗಂಡನು ಆತ್ಮ ಬಲಿದಾನ ಮಾಡಿಕೊಳ್ಳುತ್ತಾನೆ. ಆದರೆ ಅವನ ಹೆಸರಿನಿಂದ ಇಲ್ಲಿ ಕಥನಗೀತೆಗಳು ರೂಪುಗೊಳ್ಳುವುದಿಲ್ಲ. ಸ್ತ್ರೀಯರ ಹೆಸರಿನಿಂದಲೇ ರೂಪುಗೊಳ್ಳುವುದು. ಅವಳು ಆದರ್ಶವಾಗಿ ನಡೆದರೂ ಅದನ್ನು ಆದರ್ಶಕ್ಕಿಂತ ವಾಸ್ತವವಾಗಿ ನಂಬಿ ನಡೆದ ವ್ಯಕ್ತಿಗಳು ಪೂಜನೀಯರಾಗುತ್ತಾರೆ.

ಆತ್ಮಾರ್ಪಣೆ ಮಾಡಿಕೊಂಡ ಕಥನ ಗೀತೆಯಲ್ಲಿ ಎರಡನೆಯ ರೀತಿಯ ಕಥನ ಗೀತೆಯಲ್ಲಿ ಪತಿಯ ಮರಣನಂತರ ಸತಿ ಅಗ್ನಿಪ್ರವೇಶ ಮಾಡಿ ತಾನೂ ಪತಿಯ ಪಾದ ಸೇರಿ ಮಹಾಸತಿಯಾಗುವ ಬಗೆಯನ್ನು ಜನಪದ ಗೀತೆಗಳಲ್ಲಿ ಕಾಣಬಹುದು. ಅಂತಹ ಕಥನ ಗೀತೆಗಳಲ್ಲಿ ಈರೋಬಿ, ಚಿಕ್ಕೋಳು ಹಿರಿದಿಮ್ಮಿ, ನಾಗವ್ವ, ಜಗುನೆಯ ಜಕ್ಕಣ್ಣ ಕಾವ್ಯಗಳನ್ನು ಹೆಸರಿಸಬಹುದು.

ಈರೋಬಿ ಕಥನ ಗೀತೆಯ ಪ್ರಕಾರ ಈರೋಬಿಯ ಪತಿ ಶೆಟ್ಟಿ ಶಂಕರರಾಯ. ಇವನು ಮಡದಿಗೆ ಚಿನ್ನದ ಹರಿವಾಣವನ್ನು ತರಲೆಂದು ಘಟ್ಟದ ಕೆಳಗೆ ಹೋಗಿದ್ದವನು ಸುಮ್ಮನೆ ಮಲಗಿದ್ದ ಹುಲಿಯನ್ನು ಕೆಣಕಿ ದುರ್ಮರಣಕ್ಕೆ ಈಡಾದ ಸುದ್ದಿ ಬರುತ್ತದೆ. ಅಂದು ಈರೋಬಿಗೆ ನಿತ್ಯದಂತೆ ಎಚ್ಚರವಾಗಿರುವುದಿಲ್ಲ. ಅವಳಿಗೆ ಕೆಟ್ಟಕನಸುಗಳು ಬಿದ್ದಿರುತ್ತವೆ. ಹುತ್ತದ ಮೇಗಣ ಕಾಣೆನೆತ್ತರು ಕಾರುವ, ಮೂಗುತಿ ಮುರಿದು ಹೋಗುವ, ಹಲ್ಲಿಗಳು ಬೀಳುವ, ಕನ್ನಡಿ ಚೂರಾಗಿ ಒಡೆದು ಹೋಗುವ ಸ್ವಪ್ನಗಳು ಅಪಶಕುನವಾಗಿ ಮೂಡಿಬರುತ್ತಿವೆ. ಅಂತಹ ಸಮಯದಲ್ಲಿ ಅತ್ತೆಯೇ ಸೊಸೆಯನ್ನು ಎಳಿಸುತ್ತಾಳೆ. ಸೊಸೆ ತಾನು ಕಂಡ ಕನಸುಗಳನ್ನು ಅತ್ತೆಯ ಹತ್ತಿರ ಹೇಳುತ್ತಾ ಇದಕ್ಕೆ ವಿವರಿಸುವಂತೆ ಕೇಳುತ್ತಾಳೆ. ಆದರೆ ಅತ್ತೆ ಇದು ಮಾಗಿಯ ಕನಸು ಎಂದು ಸಮಾಧಾನ ಹೇಳುವುದನ್ನು ನೋಡಿದರೆ ಅತ್ತೆ ಸೊಸೆಯರ ಸಂಬಂಧ ಎಷ್ಟು ಅನೋನ್ಯವಾಗಿದೆ ಎಂಬುದನ್ನು ನೋಡಬಹುದು.

ಮುಂಗೋಳಿ ಕೂಗಿತು ಮೂಡು ಕೆಂಪೇರಿತು
ಏಳೆ ಈರೋಬಿ ಬೆಳಗಾದೊ ನಿನ್ನಟ್ಟಿ
ಕೀಲಾರದೆಮ್ಮೆ ಕರುವುಂಡೊ[21]

ಎಂಬ ಸಾಲುಗಳು ಗಾಢನಿದ್ದೆಯಲ್ಲಿದ್ದ ಸೊಸೆಯನ್ನು ಅತ್ತೆ ಮಮತೆಯಿಂದ ಏಳಿಸುವ ಸೊಗಸನ್ನು ಬಣ್ಣಿಸುತ್ತವೆ. ಅತ್ತೆಯ ಜೊತೆಯಲ್ಲಿ ಈರೋಬಿ ಹೆಚ್ಚು ಸಲಿಗೆಯನ್ನೆ ಬೆಳಸಿ ಕೊಂಡಿದ್ದಾಳೆ. ತನ್ನ ಸ್ವಪ್ನಕ್ಕೆ ಅರ್ಥವನ್ನು ಕೊಡುವ ಪರಿ, ಅದಕ್ಕೆ ಉತ್ತರ ನೀಡುವ ಬಗೆ ಇಲ್ಲಿ ಗಮನಾರ್ಹ.

ಅತ್ಯಮ್ಮ ಅತ್ಯಮ್ಮ ಕೆಟ್ಟ ಸ್ವಪ್ನವ ಕಂಡೆ
ದಿತ್ತುಳ್ಳಿಕಾರ ನಿನಮಗ ಮನಗೋಮಂಚ
ನಿಟ್ಟೆಲ್ಲ ಕತ್ತಿ ಕವಿಯಾದೊ[22]

ಎನ್ನುವ ಸೊಸೆಯ ಮಾತಿಗೆ ಅತ್ತೆ ಉತ್ತರಿಸುತ್ತಾಳೆ. ಅದನ್ನು ಕಾವ್ಯದಲ್ಲಿ ಜನಪದರು ಹೇಗೆ ತಂದಿದ್ದಾರೆ ಎಂಬುದೆ ವಿಶಿಷ್ಟವಾದದ್ದು.

ಮಾಗಿಯ ಸ್ವಪ್ನ ಮನೆಗೆ ಮೂಗಂಡುಗ
ನಮಗಲ್ಲ ಕಾಣೆ ಪರರಿಗೆ.[23]

ಉತ್ತರ ದೇವಿಯ ಕತೆಯಲ್ಲಿ ಚಿತ್ರಿತವಾದ ಅತ್ತೆಗೂ, ಈರೋಬಿಯ ಕತೆಯಲ್ಲಿ ಬರುವ ಅತ್ತೆಗೂ ಸಾಕಷ್ಟು ಅಂತರವನ್ನು ಇಲ್ಲಿ ಗುರುತಿಸಬಹುದು. ಅದೇ ರೀತಿ ಹೊನ್ನಾಲಿ ಕತೆಯ ಅತ್ತೆ ಸಹ ಸೊಸೆಯನ್ನು ತಿರಸ್ಕರಿಸಿದವಳು. ಆದರೆ ಇಲ್ಲಿಯ ಅತ್ತೆ ಸೊಸೆಯ ಭಯ ಆತಂಕಗಳನ್ನು ನಿವಾರಿಸಿಕೊಂಡು ಎಚ್ಚರಿಕೆಯಿಂದ ಇರುವವಳು.

ಹೀಗೆ ಅತ್ತೆ ಸೊಸೆಯರು ನಲುವಿನಿಂದ ಇರುವಾಗ ಶೆಟ್ಟಿ ಶಂಕರರಾಯನ ಮರಣದ ವಾರ್ತೆ ಬಂದು ಈರೋಬಿಯ ಬದುಕಿನಲ್ಲಿ ಕತ್ತಲನ್ನು ಕವಿಸುತ್ತದೆ. ಈರೋಬಿ ಪತಿಯ ಮರಣದ ನಂತರ ಸತಿಯಾದದ್ದನ್ನು ಹೇಳುತ್ತದೆ. ಈರೋಬಿಯ ತಂದೆ ದೊಡ್ಡದೊಂದು ಕೊಡಲಿಯನ್ನು ಹೆಗಲೇರಿಸಿ ಕಾಡಿಗೆ ಕಟ್ಟಿಗೆ ತರಲು ಹೋಗುತ್ತಾನೆ. ಅಪ್ಪನಿಗೆ ಮತ್ತೊಂದಿಷ್ಟು ಹೆಚ್ಚಾಗಿ ಕಡಿಯುವಂತೆ ಹೇಳುತ್ತಾಳೆ. ಅದೇ ರೀತಿ ತನ್ನ ಅಣ್ಣಂದಿರಿಗೂ ಹೆಚ್ಚಾಗಿ ಕಡಿಯುವಂತೆ ಹೇಳುತ್ತಾಳೆ.

ಬೆಂಕಿಗಾಗಿ ದೊಡ್ಡದೊಂದು ಕೊಂಡವನ್ನು ತಯಾರಿಸುತ್ತಾರೆ. ಈ ಕೊಂಡದ ಮೇಲೆ ಕಟ್ಟಿಸುವ ಗುಡಿಯ ಬಗ್ಗೆ ವಿವರಗಳು ಬರುತ್ತವೆ. ಈ ಮಾತುಗಳನ್ನು ವಿವರಿಸುವ ಸಾಲುಗಳು ಈ ರೀತಿ ಇವೆ.

ಕೊಂಡ ತಗಿಯೋರು ನೀವು ಚೆಂದಾಗಿ ತಗಿರಯ್ಯ
ಕೊಂಡದ ಮೇಲೆ ಗುಡಿ ಕಟ್ಟಿ ತಗಿದಾರೆ
ನಿಮಗೆ ಗಂಡು ಸಂತಾನ ದೊರೆಯೋದು[24]

ಒಟ್ಟಿನಲ್ಲಿ ಕೊಂಡದ ಸಿದ್ಧತೆ ವಿಜೃಭಣೆಯಿಂದ ನಡೆಯುವಂತೆ ಈರೋಬಿಯೇ ಮಾರ್ಗದರ್ಶನ ನೀಡುತ್ತಾಳೆ. ಈರೋಬಿ ತಂದೆಯ ಮನೆಗೆ ಹೋಗಿ ಉಡಿಗಿಚ್ಚನ್ನು ಬೇಡುತ್ತಾಳೆ. ಈರೋಬಿಯ ತಂದೆ ಇವಳು ಕಿಚ್ಚಿಗೆ ಹೋಗುವುದು ಬೇಡವೆನ್ನುತ್ತಾನೆ. ಸೀರೆ ಉಡು, ಕುಪ್ಪಸ ತೊಟ್ಟಕೊ ಮಲ್ಲಿಗೆ ಹೂ ಮುಡಿದುಕೊ, ಕಿಚ್ಚಿಗೆ ಬೀಳುವುದು ಬೇಡವೆಂದು ಹೇಳುತ್ತಾನೆ. ಅದೇ ರೀತಿ ಅಣ್ಣ, ತಾಯಿಯರ ವಿರೋಧವನ್ನು ಕಾಣಬಹುದು.

ಈರೋಬಿ ದೃಢವಾದ ತೀರ್ಮಾನಕ್ಕೆ ಬಂದಿದ್ದಾಳೆ. ತಂದೆಯ, ತಾಯಿಯ ಸಂತೈಸುವಿಕೆಗೆ ಈರೋಬಿ ಈ ರೀತಿ ಪ್ರತಿಕ್ರಿಯಿಸುತ್ತಾಳೆ.

ಗಂಡ ಸಾಯೋಕಿಂತ ಮುಂಡ್ಯಾಗೋಕಿಂತ
ಕಂಡೋರ ಮನೆಯ ಕಸನ್ಹಾಕಿ ಸಾಯೋಕಿಂತ
ಕೊಂಡವನ್ನೋದೆ ಕಡು ಲೇಸು[25] ಎಂದು ಉತ್ತರಿಸುತ್ತಾಳೆ.

ಈರೋಬಿಯ ಆತ್ಮರ್ಪಾಣೆ ಒಂದು ಕಡೆ ಗಂಡನ ಗಾಢವಾದ ಪ್ರೀತಿ ಅವಳನ್ನು ಆ ಕಡೆ ಸೆಳೆದಿದೆ ಎಂದು ತಿಳಿಯಬಹುದು. ಸಮಾಜದಲ್ಲಿ ಗಂಡ ಸತ್ತ ಸ್ತ್ರೀ ಅನುಭವಿಸುವ ಕಷ್ಟಗಳು, ಅವಳನ್ನು ನಡೆಯಿಸಿಕೊಳ್ಳುವ ರೀತಿ, ಅವಳಿಗೆ ಸಿಗುವ ಬೇಡಿಕೆಗಳು. ಇವುಗಳಿಗೆ ನೊಂದು ಅವಳನ್ನು ಕೊಂಡಕ್ಕೆ ಹೋಗುವಂತೆ ಪ್ರೇರೇಪಿಸಬಹುದು.

# ನಾಗವ್ವ

ಈರೋಬಿಯ ಕತೆ ವಿವಾಹಿತ ಪುರುಷನೊಬ್ಬ ತನ್ನ ಪತ್ನಿಯೊಡನೆ ಪ್ರೇಮದಿಂದ ಕೆಲಕಾಲವಾದರೂ ಜೀವನ ಮಾಡಿ, ಬಾಣಂತಿಯಾಗಲಿರುವ ಅವಳಿಗೆ ಚಿನ್ನದ ಹರಿವಾಣವನ್ನು ತರಲು ಹೋಗಿ ಮಡಿದವನು. ಪ್ರೇಮದ ಪತಿಯ ಅಗಲಿಕೆಯ ತೀವ್ರ ತರವಾದ ದುಃಖ ಈರೋಬಿಯನ್ನು ಕೊಂಡಕ್ಕೆ ಪ್ರೇರೇಪಿಸಿದ್ದಿರಬಹುದು. ಆದರೆ ನಾಗವ್ವನ ಆದರ್ಶ ಇನ್ನೂ ಹಿರಿದಾದುದು. ವಿವಾಹಕ್ಕೆ ಮೊದಲೇ, ಪ್ರೇಮವೆಂಬುದರಲ್ಲಿ ಸಿಲುಕಿಕೊಂಡ ನಾಗವ್ವ ಕೊಂಡವೇರುವ ತೀರ್ಮಾನಕ್ಕೆ ಬರಲು ಪ್ರೇರಣೆ ನೀಡುತ್ತದೆ.

ನಾಗವ್ವನನ್ನು ನವಿಲೂರಿನ ಚಂದಯ್ಯನಿಗೆ ಕೇಳಬಂದಿದ್ದಾರೆ. ನಾಗವ್ವನ ಮನೆಯವರು ನನ್ನ ಮಗಳು ಇನ್ನೂ ಚಿಕ್ಕವಳು ಎಂದು ಮೊದಲು ವಿರೋಧಿಸಿದರೂ ಅನಂತರ ಸಮ್ಮತಿಯನ್ನು ನೀಡುತ್ತಾರೆ.

ಮದುವೆಗೆ ಸಿದ್ಧತೆಗಳಾಗುತ್ತವೆ. ಇತ್ತ ಹೆಣ್ಣಿನ ಮನೆಯಲ್ಲಿ ಶಾಸ್ತ್ರದ ಬಳೆಗಳನ್ನು ತೊಡಿಸುವಾಗ ಅಪಶಕುನಗಳಾಗುತ್ತವೆ. ಆದರೆ ಒದಗಿದ ಲಗ್ನವನ್ನು ತಪ್ಪಿಸಲು ಸಾಧ್ಯವಾಗದೆ ಸಿದ್ಧತೆಗಳು ನಡೆಯುತ್ತವೆ. ಜನಪದರಲ್ಲಿ ಒಂದು ಗಾಢವಾದ ನಂಬಿಕೆ ಇರುತ್ತದೆ. ಉದಾಹರಣೆಗೆ: ಮದುವೆ ನಾಳೆ ನಡೆಯುತ್ತದೆ ಎಂದು ಇಟ್ಟುಕೊಂಡಾಗ ಅವರ ಗುಂಪಿನಲ್ಲಿ ಯಾರದಾರು ಮರಣವನ್ನಪ್ಪಿದರೆ ಅವರು ಮದುವೆಯನ್ನು ನಿಲ್ಲಿಸುತ್ತಾರೆ. ಇದನ್ನು ಮೀರಿ ನಡೆದಾಗ ಮತ್ತೊಂದು ರೀತಿಯ ತೊಂದರೆಗೆ ಗುರಿಯಾಗುವುದು. ಅದೇ ರೀತಿ ಇಲ್ಲಿ ಇವರ ಅಪಶಕುನಗಳು ಮತ್ತೊಂದು ರೀತಿಯ ದುರಂತಕ್ಕೆ ಕಾರಣವಾಗಿವೆ.

ನವಿಲೂರಿನಲ್ಲಿ ಚಂದಯ್ಯ ಮದುವಣಿಗನಾಗಿ ಉಗುರೆಣ್ಣೆ ಮೀಯುವಾಗ ತಂಗಿ ಚೆಲವಮ್ಮ ತಮ್ಮ ಬೇಡರು ತಮ್ಮ ಆಡನ್ನು ಹೊಡೆದ ಸುದ್ದಿಯನ್ನು ತರುತ್ತಾಳೆ. ಹಸಿಯ ಮೈಯಲ್ಲೆ ಚಂದಯ್ಯ ಕಾಡಿಗೆ ಹೋಗಿ ಆಡುಗಳನ್ನು ಬಿಡಿಸಿಕೊಂಡು ಬರುತ್ತಾನೆ. ಆದರೆ ಮನೆಗೆ ಮರಳಿದಾಗ ಕುಂಟಾಡಿನ ಮರಿ ಕಾಣಿಸದೆ ಮತ್ತೆ ಕಾಡನ್ನೆಲ್ಲ ಹುಡುಕಿ ಬರುವಾಗ ಸೀಗೆಯ ಮೆಳೆಯಲ್ಲಿ ಅಡಗಿಕೊಂಡಿದ್ದ ಬೇಡರು ಅವನನ್ನು ಕೊಂದುಬಿಟ್ಟರು.

ಲಗ್ನಕ್ಕೆ ಮುನ್ನವೇ ಕೈ ಹಿಡಿಯಬೇಕಾಗಿದ್ದ ಪುರುಷ ತೀರಿಕೊಂಡಿದ್ದ. ಆದರೆ ಅವನ ಹೆಸರೆತ್ತಿ ತನಗೆ ಮದುವೆಯ ಶಾಸ್ತ್ರಗಳನ್ನು ಆರಂಭಿಸಿದ್ದರು. ಮದುವೆ ಪೂರ್ಣವಾಗದಿದ್ದರೂ ಮಾನಸಿಕವಾಗಿ ಚಂದಯ್ಯನನ್ನು ಅವಳು ಪತಿಯಾಗಿ ಒಪ್ಪಿಕೊಂಡಿದ್ದಳು. ಮದುವೆಯ ಸಕಲ ಸಿದ್ಧತೆಗಳು ನಡೆಯುತ್ತಿದ್ದಾಗ ಅವಳನ್ನು ಕೈ ಹಿಡಿಯಬೇಕಾದವನು ತೀರಿ ಹೋದಾಗ ಅವಳಿಗಾಗುವ ದುಃಖತಪ್ತ ಮನಸ್ಸು

ಆಲೋಚಿಸದೆ ಭಾವತೀತಾ ರೇಖೆಗೆ ಒಳಗಾಗಿ ಹತೋಟಿಯನ್ನು ಕಳೆದುಕೊಂಡ ಸ್ಥಿತಿಯಲ್ಲಿ ಆತ್ಮಾರ್ಪಣೆ ಮಾಡಿಕೊಂಡ ಪರಿಸ್ಥಿಯ ಸಾಕಷ್ಟು ನಡೆಯುತ್ತಿರುವುದನ್ನು ನೋಡಬಹುದು.

ಇಂತಹ ಪರಿಸ್ಥಿತಿಯಲ್ಲಿ ನಾಗವ್ವನು ಕೆಂಡವೇರಲು ಮುಂದಾಗುವುದರಲ್ಲಿ ಆಶ್ಚರ್ಯವಿಲ್ಲ.

ಹೆಣ್ಣಿಗೆ ಮಣ್ಣು ಬಿದ್ದೊ ಕಣ್ಣಿಗೆ ಸೆತ್ತೆ ಬಿದ್ದೊ
ಸಣ್ಣ ಸೀರೆ ಮ್ಯಾಲೆ ಕಿಡಿ ಬಿದ್ದೊ ನಾಗವ್ವನ
ಹಣೆಗಂಟು ನಲುಗಿ ಉರಿದ್ಹೋದೊ[26]

ಎಂಬ ಸಾಲುಗಳು ಸುಂದರವಾದ ಬದುಕನ್ನು ನಡೆಸಲು ನಾಗವ್ವ ಲಗ್ನಕ್ಕೆ ಸಿದ್ಧವಾಗಿದ್ದಳು, ಅಲಂಕರಿಸಿಕೊಂಡಿದ್ದವಳು, ಅವಳ ಬದುಕು ಘೋರ ದುರಂತಕ್ಕೆ ಈಡಾಯಿತು. ಆ ಹೆಣ್ಣಿನ ಬಾಳು ಮಣ್ಣು ಪಾಲಾಯಿತು. ಅವಳ ಮುತ್ತಿನಂತ ಕಣ್ಣು 'ಸೆತ್ತೆ' ಬಿದ್ದು ಕುರುಡಾಯಿತು. ಸಣ್ಣ ಸೀರೆಯ ಮೇಲೆ ಹೂ ಚೆಲ್ಲುವ ಬದಲಾಗಿ ಕಿಡಿಯನ್ನು ಚೆಲ್ಲಿದರು. ಹಣೆಗಂಟು ಬೆಂಕಿಯಲ್ಲಿ ನಲುಗಿ ಉರಿದು ಹೋಯಿತು. ಅಸಹಾಯಕಳೂ, ಮುಗ್ದೆಯೂ ಆದ ಬಾಲೆಯೊಬ್ಬಳು ತನ್ನ ಬದುಕಿನ ಸುಂದರ ದಿನಗಳನ್ನು ಕಾಣುವ ಮುನ್ನವೆ ಅಗ್ನಿಗೆ ಆಹುತಿಯಾದುದನ್ನು ಕಥನ ಗೀತೆಯಲ್ಲಿ ಕವಿ ಚಿತ್ರಿಸಿದ್ದಾನೆ. ಈ ಕಥನ ಗೀತೆ ಮದುವೆಗೆ ಮುಂಚೆ ಗಂಡ ಸತ್ತುಹೋದಾಗ ಹೆಣ್ಣು ಪಡುವ ಯಾತನೆಗಳನ್ನು ನೋಡಬಹುದಾಗಿದೆ.

## ಚಿಕ್ಕೋಳು ಹಿರಿದಿಮ್ಮವ್ವ

ಚಿಕ್ಕೋಳು ಹಿರಿದಿಮ್ಮವ್ವ ಏಳು ಜನ ಅಣ್ಣಂದಿರ ಮುದ್ದಿನ ತಂಗಿ. ಅವರು ಹೊಲಕ್ಕೆ ಬೇಸಾಯ ಮಾಡಲು ಹೋದರೆ ಇವಳು ಏಳುಗೂಡಿನ ದನವನ್ನು ಬಿಟ್ಟುಕೊಂಡು ಮೇಯಿಸಲಿಕ್ಕೆ ಹೋಗುತ್ತಾಳೆ. ಹೀಗೆ ಮೇಯಿಸುವಾಗ ಒಂದು ಆಲದಮರದ ಮೇಲೆ ಕುಳಿತಿರುವ ಪರದೇಶಿ ಕಂದಯ್ಯನನ್ನು ನೋಡುತ್ತಾಳೆ. ತಂದೆಯಿಲ್ಲ, ತಾಯಿಯಿಲ್ಲ ಪರದೇಶಿ ನಾನು ಎಂದ ಅವನಿಗೆ ಹಿರಿದಿಮ್ಮಿ ಉಣ್ಣಲಿಕ್ಕೆ ಊಟ, ಹೊದಿಯಾಕೆ ಬಟ್ಟೆ ಕೊಡುವೆ ನಾನು ನಮ್ಮ ಮನೆಯೊಳಗೆ ಇದ್ದುಕೊಂಡು ಏಳುಗೂಡಿನ ದನವ ಕಾಯ್ದುಕೊಂಡು ಇರುತೀಯ ಎಂದು ಕೇಳುತ್ತಾಳೆ. ಇವನು ಒಪ್ಪಿಕೊಳ್ಳುತ್ತಾನೆ. ಇವನನ್ನು ದನ ಕಾಯಲು ಹೇಳಿ ತನ್ನ ಅಣ್ಣಂದಿರ ಹತ್ತಿರಕ್ಕೆ ಹೋಗಿ ಅವನ ವಿಚಾರ ಹೇಳಲು ಮೊದಲು ಬೇಡವೆಂದೆ ಹೇಳುತ್ತಾರೆ. ಇವಳು ಪರದೇಶಿ ಕಂದಮ್ಮ ನಮ್ಮನೇನ ಮಾಡುತ್ತಾನೆ ಎಂದು ಕೇಳಿಕೊಂಡ ಮೇಲೆ, ಎಷ್ಟಾದರು ಚಿಕ್ಕವಳು, ಮುದ್ದಿನವಳೂ ಆಗಿದ್ದ ಇವಳ ಮಾತಿಗೆ ಒಪ್ಪುತ್ತಾರೆ. ಹಿರಿದಿಮ್ಮಿ ಬೊಮ್ಮೇಲಿಂಗನಿಗೆ ಹಿಟ್ಟು ಬಟ್ಟೆಯ ತಂದು ಕೊಡುತ್ತಾಳೆ. ತನ್ನ ಅಣ್ಣಂದಿರಿಗೆಲ್ಲ ಊಟ ಕಟ್ಟಿಕೊಂಡು ಬುತ್ತಿಯನ್ನು ಒಯ್ಯುದು ಬಿರಬಿರನೆ ಬರುವಾಗ, ಬೇಡರ ಬೊಮ್ಮೇಲಿಂಗ ದನಗಳ ಕಾಯುತ್ತಿದ್ದವನು ಅಡ್ಡ ಬಳಸಿ ಬಂದು ಮುತ್ತಿನ ಮುಜರಂಗ ಹಿಡಿದ ಚಿಕ್ಕೋಳು ಹಿರಿದಿಮ್ಮವ್ವ ಸಿಕ್ಕಿದೇನೆ? ದಕ್ಕಿದೇನೆ? ಎಂದು ಅವಳ ಸೆರಗು ಹಿಡಿಯಲಿಕ್ಕೆ ಬರುತ್ತಾನೆ. ಇವಳು ತಪ್ಪಿಸಿಕೊಂಡು ಹೀಗೆ ಮಾಡಿದರೆ ತನ್ನ ಅಣ್ಣಂದಿರಿಂದ ಬರುವ ಅಪಾಯಗಳನ್ನು ಅವನಿಗೆ ಹೇಳಿ ಎಚ್ಚರಿಸಿ ಹೋಗುತ್ತಾಳೆ. ಇವಳ ತಲೆಯೆಲ್ಲ ಕೆದರಿದೆ, ಮುಖವೆಲ್ಲ ಬಾಡಿದೆ, ಅಣ್ಣಂದಿರು ಕೇಳುತ್ತಾರೆ ತಲೆಯಾಕೆ ಕೆದರ್ಯಾದೆ, ಮೊಕವ್ಯಾಕೆ ಬಾಡ್ಯಾದೆ? ಅದಕ್ಕೆ ಹಿರಿದಿಮ್ಮವ್ವ ಕಗ್ಗಲ ಕಣಿವೆಯೊಳಗೆ ಬರುವಾಗ ಒಂದು ಕರಡಿ ಬಂದಾಗ ಓಡಿ ಬಂದು ಒಂದು ಮುಳ್ಯಾನೆ ತಗಲಿದೆ ಎಂದು ಸುಳ್ಳನ್ನು ಹೇಳುತ್ತಾಳೆ. ಇವರಿಗವರ ತಂಗಿಯ ಮೇಲೆ ಬಹಳ ಪ್ರೀತಿ ಇದ್ದ ಕಾರಣ, ಒಬ್ಬ ಅಣ್ಣ ಇವಳನ್ನು ಊರ ಮಗ್ಗುಲಿನ ಕಣದವರೆಗೂ ಬಿಟ್ಟು ಬರುತ್ತಾನೆ. ಹಿರಿದಿಮ್ಮವ್ವ ಮೈನೆರೆದ ವಿಷಯವನ್ನು ಅವರ ಅತ್ತೆಯರು ಅವಳ ಅಣ್ಣಂದಿರಿಗೆ ತಿಳಿಸುತ್ತಾರೆ. ಅಣ್ಣಂದಿರು ಬಾಳ ಸಡಗರದಿಂದ ಮನೆಗೆ ಬರುತ್ತಾರೆ. ಹಿರಿದಿಮ್ಮವ್ವನಿಗೆ ಅದ್ದೂರಿಯಾಗಿ ಮದುವೆ ಮಾಡಲು ಯೋಚಿಸಿ, ಅವಳಿಗೊಸ್ಕರ ಒಂದು ಗುಡಿಸಲನ್ನು ಹಾಕಿ ಅವಳನ್ನು ಕಾಯುತ್ತಾ ಮಲಗುತ್ತಾರೆ. ಆಗ ಬೇಡರ ಬೊಮ್ಮೇಲಿಂಗ ಕೊಬರಿಯನ್ನು ಎಸೆಯುತ್ತಾನೆ. ಹಿರಿದಿಮ್ಮವ್ವ ಅದನ್ನು ಆಚೆಗೆ ಎಸೆಯುತ್ತಾಳೆ. ಅವಳು ಎಸೆಯುವಾಗ ಕೈಯ ಬಳೆ ಗಳಿರೆಂದು ಶಬ್ದ ಮಾಡುತ್ತದೆ. ಅಣ್ಣಂದಿರು ಕೈಯ ಬಳೆಯ ಶಬ್ದ ಯಾಕೆ ಆಯ್ತು ಎಂದು ಕೇಳುತ್ತಾರೆ. ಕೈಯ ತುಪ್ಪದ ಜಿಡ್ಡಿಗೆ ಇರುವೆ ಮುತ್ತಿಕೊಂಡಿದ್ದಕ್ಕೆ ಕೊಡವಿದೆ. ಆಗ ಬಳೆಗಳು ಶಬ್ದ ಮಾಡಿಸವು ಎಂದು ಸುಳ್ಳು ಹೇಳುತ್ತಾಳೆ. ಹದಿನಾರು ದಿನಗಳ ನಂತರ ಅವಳ

ಮಾವನನ್ನು ಕರೆಸಿ ಸೋಬಾನವನ್ನು ಗೊತ್ತುಮಾಡಿ. ಒಂದು ತಿಂಗಳಿನ ನಂತರ ಅವಳ ಗಂಡನ ಮನೆಗೆ ಹೊಸ ಸೀರೆ ಉಡಿಸಿ, ಹೊಸ ರವಿಕೆ ತೊಡಿಸಿ, ತಲೆಬಾಚಿ, ಅರಿಶಿಣ ಕುಂಕುಮವಿಟ್ಟು, ಮಡಿಲಕ್ಕಿ ಹುಯ್ದು ಕಳಿಸುತ್ತಾರೆ.

ಗಂಡನ ಜೊತೆ ಹೋಗುವಾಗ ಅಡವಿಯಲ್ಲಿ ಒಂದು ಬಾವಿಯ ಹತ್ತಿರ ಬುತ್ತಿಯ ಉಣಲಿಕ್ಕೆಂದು ಕುಳಿತಾಗ ಬೇಡರ ಬೊಮ್ಮೇಲಿಂಗ ಚಂದ್ರಾಯುಧ ತೆಗೆದುಕೊಂಡು ಒಂದೇ ಏಟಿಗೆ ಹಿರಿದಿಮ್ಮವ್ವನ ಗಂಡನನ್ನು ಕಡಿದು ಬಿಡುತ್ತಾನೆ. ಹಿರಿದಿಮ್ಮವ್ವ ಧೈರ್ಯವನ್ನು ಕುಂದಿಸದೆ ಬೊಮ್ಮೇಲಿಂಗನನ್ನೇ ತನ್ನ ಗಂಡನೆಂದು ಹೇಳಿ ಅವನನ್ನು ಉಣಲಿಕ್ಕೆ ಕೂಡಿಸಿ ತಾನು ಚಂದ್ರಾಯುಧ ತೆಗೆದುಕೊಂಡು ಕಡಿದು ಬಿಡುತ್ತಾಳೆ. ಸಾಕುನಾಯಿಂದ ಅಣ್ಣಂದಿರಿಗೆ ಸುದ್ದಿ ಹೋಗುತ್ತದೆ. ಅವರು ತಂಗಿಯನ್ನು ಹುಡುಕಿಕೊಂಡು ಬರುತ್ತಿರುವಾಗ ವಿಚಿತ್ರವಾದ ಭಯ ಭೀಕರವಾದ ದೃಶ್ಯವೊಂದನ್ನು ನೋಡುತ್ತಾರೆ.

ಚಿಕ್ಕೋಳು ಹಿರಿದಿಮ್ಮವ್ವ ಸುವ್ವಲಾಲೆ
ಹಿಂದಿರುಗಿ ಬರುತ್ತಾಳೆ ಸುವ್ವಲಾಲೆ
ಗಂಡಾನ ತಲೆಯನ್ನು ಸುವ್ವಲಾಲೆ
ಮಡಿಲಾಗೆ ಕಟ್ಟಿಕೊಂಡು ಸುವ್ವಲಾಲೆ
ಬೊಮ್ಮೆ ಲಿಂಗನ ತಲೆಯ ಸುವ್ವಲಾಲೆ
ಕಾಲಾಗೆ ಒದ್ದುಕೊಂಡುಸುವ್ವಲಾಲೆ
ಬರುತ್ತಾಳೆ ಬೇಗದಿಂದ ಸುವ್ವಲಾಲೆ[27]

ಗಂಡನ ತಲೆಯನ್ನು ಮಡಿಲಲ್ಲಿ ಕಟ್ಟಿಕೊಂಡು, ಬೇಡರ ಹುಡುಗನ ತಲೆಯನ್ನು ಕಾಲಿನಲ್ಲಿ ಒದೆದುಕೊಂಡು ಹಿರಿದಿಮ್ಮವ ಬರುತ್ತಿದ್ದಳು ಎಂಬ ಭಯಂಕರ ದೃಶ್ಯವನ್ನು ಕಲ್ಪಿಸುತ್ತಾನೆ. 'ಹೆಣ್ಣು ಒಲೆದರೆ ನಾರಿ ಮುನಿದರೆ ಮಾರಿ' ಎಂಬ ಗಾದೆಯಂತೆ ಹಿರಿದಿಮ್ಮವ ಗಂಡನಿಗೆ ಒಲಿದಿದ್ದಾಳೆ. ಬೊಮ್ಮೇಲಿಂಗನಿಗೆ ಅವಳು ಎಚ್ಚರಿಸಿದ್ದಾಳೆ. ಬೊಮ್ಮೇಲಿಂಗ ಅದನ್ನು ಅರಿತು ಕೊಳ್ಳದೆ ಅವಳನ್ನು ಮತ್ತೆ ಮತ್ತೆ ಪಡೆಯಲು ಪ್ರಯತ್ನಿಸುತ್ತಾನೆ. ಕೊನೆಗೆ ಅವಳು ಮದುವೆಯಾದ ಗಂಡನನ್ನು ಕಡಿದಾಗ ಅವಳ ಕೋಪ, ದುಃಖ ಅತಿರೇಖಕ್ಕೆ ಹೋದ ಸಂದರ್ಭದಲ್ಲಿ ಸ್ತ್ರೀ ಹೇಗೆ ರಾಕ್ಷಸಿ ರೂಪವನ್ನು ತಾಳುತ್ತಾಳೆ ಎಂದು ಅರ್ಥೈಸಿಕೊಳ್ಳಬಹುದು.

ಹಿರಿದಿಮ್ಮವ್ವ ಕೆಂಡಕೊಂಡವಾಗುವ ರೀತಿಯೆ ಬೇರೆಯಾದದ್ದು. ಅವಳು ತನ್ನ ಗಂಡನ ತಲೆಯನ್ನು ತನ್ನ ನೆತ್ತಿಯ ಕಡೆ ಇಟ್ಟುಕೊಂಡಳು. ಬೇಡರ ಹುಡುಗನ ತಲೆಯನ್ನು ಕಾಲಿನ ಬಳಿ ಇಟ್ಟುಕೊಂಡು ಅವಳು ಕೊಂಡವನ್ನೇರಿದಳು.

ಹಿರಿದಿಮ್ಮವ್ವ ಕಥನ ಗೀತೆ ಅವಳ ಕೆಂಡಕೊಂಡವಾದ ಜೊತೆಗೆ, ಬೊಮ್ಮೇಲಿಂಗ ಹಿರಿದಿಮ್ಮವನನ್ನು ತನ್ನವಳನ್ನಾಗಿ ಮಾಡಿಕೊಳ್ಳುವ ಪ್ರಸಂಗ ಕಂಡುಬರುತ್ತದೆ. ಅವಳು ಅದಕ್ಕೆ ಸಮ್ಮತಿಸದಿರುವುದು ಕಾಣಬಹುದು. ಇವನು ಕೊನೆಗೂ ಅವಳನ್ನೆ ಪಡೆಯಲು ಪ್ರಯತ್ನಿಸಿ ಹಿರಿದಿಮ್ಮವನ ಗಂಡನನ್ನು ಕತ್ತರಿಸಿ ಹಾಕುವುದು. ಕೊನೆಗೆ ಇವಳು ಅವನ ವಶವಾಗದೆ ಅವನ ತಲೆಯನ್ನು ಕಡಿದು ಕೆಂಡಕೊಂಡವಾಗುವುದು. ಹೆಣ್ಣಿನ ಅಂತರಂಗದ ಭಾವನೆಯನ್ನು ವ್ಯಕ್ತಪಡಿಸುತ್ತದೆ.

ಹಿರಿದಿಮ್ಮವ ಗಂಡನ ಪ್ರೀತಿಯಿಂದ ಒಂದು ಕಡೆ ಕೊಂಡವನ್ನೇರಿದರೆ ಮತ್ತೊಂದು ಕಡೆ ಅನ್ಯ ಪುರುಷರು ಒಬ್ಬ ಸ್ತ್ರೀಯನ್ನು ಬಲವಂತವಾಗಿ ಪಡೆದುಕೊಳ್ಳಲು ಪ್ರಯತ್ನಿಸಿದಾಗ ಅವಳ ಮನಸ್ಸು ಅದನ್ನು ಒಪ್ಪಿಕೊಳ್ಳಲು ಸಿದ್ಧವಿಲ್ಲದಂತ ಸನ್ನಿವೇಶ. ಅಂತಹ ಪರಿಸ್ಥಿಯಲ್ಲಿ ಹೆಣ್ಣು ಆತ್ಮಾರ್ಪಣೆ ಮಾಡಿಕೊಳ್ಳುವ ಪ್ರಸಂಗವನ್ನು ವ್ಯಕ್ತಪಡಿಸುತ್ತದೆ.

'ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಿಗಾರ' ಕಥನ ಗೀತೆಯಲ್ಲಿ ವಿವಾಹ ಪೂರ್ವದಲ್ಲಿಯೇ ಕೊಂಡವೇರಿದ ಪ್ರಸಂಗ ಕಾಣಬಹುದು. ಈ ಕಥನ ಗೀತೆಯಲ್ಲಿ ಊರ ಗೌಡನ ಮಗಳು ಮದುವೆಯಾಗು ಎಂದು ತಂದೆ ತಿಳಿಸುತ್ತಾನೆ. ಆದರೆ ಅವಳು ತಾನು ಭಯಂಕರವಾದ ಹಂದಿಯೊಂದನ್ನು ಕಡಿದವನನ್ನೆ, ಮದುವೆಯಾಗುವುದಾಗಿ ತಿಳಿಸುತ್ತಾಳೆ. ಮಗುನೆಯ ಬ್ಯಾಟೆಗಾರ ಸಾಹಸದಿಂದ ಹೋರಾಡಿ ಹಂದಿಯನ್ನು ಕೊಲ್ಲುತ್ತಾನೆ. ಆದರೆ ಅವನು ತೀವ್ರವಾಗಿ ಹೋರಾಡಿದ್ದರಿಂದ ಅವನು ಅದರ ಜೊತೆಯಲ್ಲಿಯೇ ಮಡಿಯುತ್ತಾನೆ.

ಜಗುನೆಯ ಜಕ್ಕಣ್ಣ ತಾನೇ ಹಂದಿಯನ್ನು ಕೊಂದುದ್ದಾಗಿ ಹೇಳಿಕೊಂಡು ಗೌಡನ ಮಗಳನ್ನು ವರಿಸುವುದಾಗಿ ಸುಳ್ಳು ಹೇಳುತ್ತಾನೆ. ಗೌಡನ ಮಗಳು ಹಂದಿಯನ್ನು ಕೊಂದವರ್‍ಯಾರು ಎಂದು ದೃಢಪಡಿಸಿಕೊಳ್ಳುತ್ತಾಳೆ. ಅವಳು ತೊಟ್ಟ ಹಠದಿಂದ ಮಗುನೆಯ ಬ್ಯಾಟೆಗಾರ ಮರಣವನ್ನು ಅಪ್ಪುತ್ತಾನೆ ಎಂದು ತಿಳಿದಾಗ ಅವಳು ಸಾಯುವ ಯೋಚನೆ ಮಾಡಿ ಕೊಂಡವಾಗಲೂ ಪ್ರೇರೇಪಿಸಿರಬಹುದು.

ಇಲ್ಲಿಯವರೆಗೂ ನೋಡಿದ ಈರೋಬಿ, ನಾಗವ್ವ, ಹಿರಿದಿಮ್ಮವ್ವ ಮತ್ತು ಜಗುನೆಯ ಜಕ್ಕಣ್ಣ ಮಗುನೆಯ ಬ್ಯಾಟಾಗಾರ ಕಥನ ಗೀತೆಗಳು ಸತಿ ಸಹಗಮನವಾಗುವ ಪದ್ದತಿಯನ್ನು ವ್ಯಕ್ತಪಡಿಸುತ್ತಿವೆ. ಅಷ್ಟೆ ಅಲ್ಲದೆ ಕಥನ ಗೀತೆಗಳು ಅವಳು ಕೊಂಡವಾಗಲು ಕಾರಣವನ್ನು ವ್ಯಕ್ತಪಡಿಸುತ್ತಿವೆ. ಸತಿಯಾಗುವವಳು ಯಾರು ತಡೆದರೂ ನಿಲ್ಲದೆ ಸತಿಯಾದಳು ಎಂದರೆ ಗಂಡನ ಮೇಲಿದ್ದ ಪ್ರೀತಿ, ಆಕ್ಷಣ ಅವಳನ್ನು ಜೀವ ಕಳೆದುಕೊಳ್ಳುವುದಕ್ಕೆ ಪ್ರೇರೇಪಿಸಬಹುದು. ಗಂಡ, ಹೆಂಡತಿಯರ ಸಂಬಂಧದಲ್ಲಿ ಅವರ

ಅನೋನ್ಯವಾಗಿದ್ದರೆ, ಆ ಅಗಲಿಕೆಯನ್ನು ಸಹಿಸಿಕೊಳ್ಳದ ಭಾವನೆಗಳು ಉದ್ರೇಕಗೊಂಡಾಗ ಮನುಷ್ಯ ಆತ್ಮರ್ಪಣೆ ಮಾಡಿಕೊಳ್ಳುವುದನ್ನು ಕಾಣಬಹುದು. ಕೆರೆಗೆ ಹಾರ, ಕೆಂಚಮ್ಮ, ಹೊನ್ನಮ್ಮ ಕಥನ ಗೀತೆಗಳಲ್ಲಿ ಮರಣವನ್ನಪ್ಪಿದಾಗ, ಗಂಡನಾದವನು ಆತ್ಮಹತ್ಯೆ ಮಾಡಿಕೊಳ್ಳುವ ಸನ್ನಿವೇಶಗಳಲ್ಲಿ ಭಾವನೆಗಳು ಉದ್ವೇಗಕ್ಕೆ ಒಳಗಾಗುವ ಪ್ರಸಂಗಗಳಲ್ಲಿ ಜೀವವನ್ನು ಕಳೆದುಕೊಳ್ಳುವುದು.

ಸತಿ ಸಹಗಮನ ಪದ್ದತಿ ಸತ್ತ ಗಂಡನ ಜೊತೆಗೆ ಅಗ್ನಿಗೆ ಆಹುತಿಯಾದಾಗ ಅವಳು ಸ್ವರ್ಗ ಸೇರುವಳು ಎಂಬ ವೈದಿಕ ಧರ್ಮ ಪ್ರಜ್ಞಾಪೂರ್ವಕವಾಗಿಯೇ ಒಳಗೊಂಡಿದೆ. ಹೀಗಾಗಿ ಇಡೀ ಸಹಗಮನದ ಪದ್ದತಿಯ ಗೀತೆಗಳು ಈ ಆಚರಣೆಯ ಬಗ್ಗೆ ಇರುವ ಭಾವವು ವಿರೋಧಿಸುವಂತಹದ್ದೆ ಆಗಿದೆ. ಕಥನ ಗೀತೆಗಳಲ್ಲಿ ಬರುವ ಶಕುನಗಳಾಗಲಿ, ಸಹಗಮನ ಸಂದರ್ಭದಲ್ಲಿ ಅವರು ಪಡುವ ದುಃಖತಪ್ತ ಭಾವಗಳು ಸಹಗಮನದ ಬಗೆಗಿನ ವಿರೋಧ, ನಿಸ್ಸಹಾಯಕತೆ ಇವುಗಳು ಸ್ವರ್ಗದ ಕಲ್ಪನೆಯ ನಂಬಿಕೆಯನ್ನು ಮುಖ್ಯವಲ್ಲವೆಂದು ಭಾವಿಸಲ್ಪಡುತ್ತದೆ.

ಪತಿಯ ಪ್ರೇಮದ ಅಗಲಿಕೆಗಿಂತ ಅವರ ಅಮೂಲ್ಯ ದಾಂಪತ್ಯದ ಜೀವನದಲ್ಲಿ ಸದಾ ತನ್ನ ಸಂಗಾತಿಯಾಗಿದ್ದ ಒಂದು ಜೀವ ಇಲ್ಲವಾದಂತಹ ಸಂದರ್ಭದಲ್ಲಿ 'ನಾನು ಬದುಕಿರಲಾರೆ' ಎಂದು ಆತ್ಮಹತ್ಯೆಗೆ ಒಳಗಾಗುವ ಪರಿಸ್ಥಿತಿ ಮತ್ತು ಸಮಾಜದಲ್ಲಿ ಪತಿ ಸತ್ತ ನಂತರ ಸ್ತ್ರೀಯನ್ನು ನೋಡುವ ದೃಷ್ಟಿಕೋನಗಳಿಗೆ ಬೇಸತ್ತು ಆತ್ಮರ್ಪಣೆ ಮಾಡಿಕೊಳ್ಳುವ ಪದ್ದತಿ ಈರೋಬಿ ಕಥನ ಗೀತೆಯಲ್ಲಿ

ಗಂಡ ಸಾಯೋಕಿಂತ ಮುಂಡ್ಯಾಗೋಕಿಂತ  
ಕಂಡೋರ ಮನೆಯ ಕಸನ್ಹಾಕಿ ಸಾಯೋಕಿಂತ  
ಕೊಂಡವನ್ನೇರೊದೆ ಕಡು ಲೇಸು[28]

ಎಂಬ ಸಾಲುಗಳು ವ್ಯಕ್ತಪಡಿಸುತ್ತವೆ. ಹೀಗೆ ಕಥನ ಗೀತೆಗಳು ಆತ್ಮಾರ್ಪಣೆಯ ವಿವಿಧ ಮಜಲುಗಳನ್ನು ತಿಳಿಯಪಡಿಸುತ್ತವೆ.

## ಉತ್ತರದೇವಿ

ಆತ್ಮಾರ್ಪಣೆ ಮಾಡಿಕೊಳ್ಳುವ ಕಥನ ಗೀತೆಗಳಲ್ಲಿ ಮೂರನೆಯ ರೀತಿಯಾಗಿ ಉತ್ತರದೇವಿ ಮತ್ತು ಹೊನ್ನಾಳಿ ಕಥನ ಗೀತೆಗಳನ್ನು ನೋಡಬಹುದು. ಉತ್ತರದೇವಿಯ ಕಥನ ಕಾವ್ಯದಲ್ಲಿ ಉತ್ತರದೇವಿಯನ್ನು ಅತ್ತೆ ನೀರು ತರಲು ತಡವಾದುದ್ದನ್ನು ಪ್ರಶ್ನಿಸುತ್ತಿದ್ದಾಳೆ. ಇದು ಮೇಲುನೋಟಕ್ಕೆ ಸಾಮಾನ್ಯವಾಗಿ ಕಂಡುಬಂದರೂ ಅದು ಅತ್ಯಂತ ಸೂಕ್ಷ್ಮ ವಿಚಾರವನ್ನು ಒಳಗೊಂಡಿರುವಂತದ್ದು. ಇದನ್ನು ಕಥನದಲ್ಲಿ 'ನೀರೇಕೆ ಕಲಕಿದವು? ನೆರಿಗೇಕೆ ಮಾಸಿದವು?[29] ಎಂಬ ಮಾತುಗಳು ಸ್ಪಷ್ಟಪಡಿಸುತ್ತವೆ. ತಡವಾಗುವುದಕ್ಕೆ ಕಾರಣಕೇಳುವ ಜೊತೆಗೆ ಅತ್ತೆ ಸೊಸೆಯನ್ನು ಅನುಮಾನಿಸುತ್ತಿರುವಂತೆ ಕಂಡುಬರುತ್ತದೆ. ಇದಕ್ಕೆ ಸೊಸೆಯಾದವಳು ಉತ್ತರವನ್ನು ಕೊಟ್ಟರೂ ಅದು ಅತ್ತೆಗೆ ಸಮಂಜಸವಾಗಿ ಕಾಣುವುದಿಲ್ಲ. ಮತ್ತು ಮಾತಿಗೆ ಮಾತು ಸೇರಿಸಿ ಜಾರಿಕೆಯ ಉತ್ತರವನ್ನು ಕೊಡುವ ಉತ್ತರದೇವಿ ಎಂಬ ಸೊಸೆ ಬೇಡ, ಬಿಟ್ಟುಬಿಡು ಅವಳ ತವರೀಗೆ ಎಂದು ಉತ್ತರದೇವಿಯ ಅತ್ತೆ ಮಗನಿಗೆ ಹೇಳುತ್ತಾಳೆ.

ಉತ್ತರದೇವಿಯ ಗಂಡ ತಾಯಿಯಾಡಿದ ಮಾತುಗಳನ್ನು ಸುಲಭವಾಗಿ ತೆಗೆದುಕೊಳ್ಳುತ್ತಿಲ್ಲ. ಅವಳನ್ನು ಬಿಡುವುದಕ್ಕೆ ಸಮ್ಮತಿಸುತ್ತಿಲ್ಲ.

ಬಿಟ್ಟುಬಿಡಲಿಕ್ಕೆ ಎತ್ತಲ್ಲ, ಎಮ್ಮೆಯಲ್ಲ
ಹತ್ತುವರ ಮುಟ್ಟಿ, ತೆರಮುಟ್ಟಿ ಬಂದವಳ
ಬಿಟ್ಟರನಾರೆ ಹಡೆದವ್ವಾ.[30]

ಎನ್ನುವ ಸಾಲುಗಳು ಅವಳನ್ನು ಬಿಡಲಿಕ್ಕೆ ಸಾಧ್ಯವಿಲ್ಲವೆಂದು ವ್ಯಕ್ತಪಡಿಸುತ್ತಿವೆ.

ಕೂಡಿದ ಹೆಂಡತಿಯನ್ನು ಬಿಡುವುದು ತರವಲ್ಲವೆಂಬಂತೆ ಮಗ ನಿರಾಕರಿಸಿದರೂ, ಮತ್ತೊಬ್ಬಳನ್ನು ತಂದು ಲಗ್ನಮಾಡುವುದಾಗಿ ತಾಯಿ ಹಠಹಿಡಿಯುತ್ತಾಳೆ. ಅಂತಹ ಪರಿಸ್ಥಿತಿಯಲ್ಲಿ ಇವನು ತಾಯಿ–ಹೆಂಡತಿಯ ಆಯ್ಕೆಯಲ್ಲಿ ತಾಯಿಯ ಪರವಾಗುತ್ತಾನೆ. ಉತ್ತರಾದೇವಿಯನ್ನು ನಿರಾಕರಿಸಿದಂತೆ ಕಂಡುಬರುವುದಕ್ಕಿಂತ ಮನುಷ್ಯನ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ನಡೆದುಕೊಳ್ಳುವ ಸ್ವಭಾವವನ್ನು ಇವನಲ್ಲಿ ಕಾಣಬಹುದು.

ಉತ್ತರದೇವಿಯನ್ನು ತವರು ಮನೆಗೆ ಕಳುಹಿಸಲು ಗಂಡನಿಗೂ ಇಷ್ಟವಿಲ್ಲ ಎನ್ನುವುದನ್ನು ನೋಡಬಹುದು. ಉತ್ತರದೇವಿ ಮಲಗಿರುವ ಮಾವಯ್ಯನನ್ನು ಊಟಕ್ಕೆ ಬನ್ನಿ ಎಂದು ಕರೆಯುತ್ತಾಳೆ. ಮಾವ ನನಗೆ ನಿನ್ನೆ ತಿಂದ ಊಟ ಇನ್ನೂ ಅರಗಿಲ್ಲ, ನಿನ್ನಾಣೆಗೂ ನಂಗೆ ಹಸಿವಿಲ್ಲ ಎಂದು ಉತ್ತರಿಸುತ್ತಾನೆ. ಮಾವಯ್ಯನಿಗೂ ಸೊಸೆಯನ್ನು

ತವರಿಗೆ ಕಳುಹಿಸಲು ಇಷ್ಟವಿಲ್ಲ. ಸೊಸೆ ನಾ ಹೋಗಿ ಬರ್ತೀನಿ ತವರೀಗೆ ಎಂದು ಹೇಳಿದಾಗ ಮಾವಯ್ಯ ಸೊಸೆಗೆ ಬುದ್ದಿವಾದವನ್ನು ಹೇಳುತ್ತಾ, ಮತ್ತೆ ನೀನು ಬರಬೇಕು ಎಂದು ತಿಳಿಸುತ್ತಾನೆ. ಅದೇ ರೀತಿ ಭಾವಯ್ಯನಿಗೆ ಹೇಳಿದಾಗಲೂ ಭಾವಯ್ಯನೂ ಅದೇ ರೀತಿ ವ್ಯಕ್ತಪಡಿಸುತ್ತಾನೆ. ಇದನ್ನು ಕಥನ ಗೀತೆಯಲ್ಲಿ ಈ ಕೆಳಗಿನ ಸಾಲುಗಳು ವ್ಯಕ್ತಪಡಿಸುತ್ತವೆ.

ಮಾಳಿಗೆಯ ಮೇಲೆ ಮಲಗಿರುವ ಮಾವಯ್ಯ
ಊಟಕ್ಕಪ್ಪಣೆ ದಯಮಾಡಿ
ನಿನ್ನೆ ಉಂಡ ಊಟ ಇನ್ನೂ ನಂಗೆ ಅರಗಿಲ್ಲಾ
ನಿನ್ನಾಣೆಗೂ ನಂಗೆ ಹಸಿವಿಲ್ಲ.
ಮಾಳಿಗೆಯ ಮೇಲೆ ಮಲಗಿರುವ ಮಾವಯ್ಯಾ
ನಾ ಹೋಗಿ ಬತ್ತೀನಿ ತವರೀಗೆ
ತವರೀಗೆ ಹೋದಾರೆ ತವರಲ್ಲಿರಬೇಡ
ತೌರೊಳ್ಳೇದಂತ ಇರಬೇಡ ಉತ್ತರದೇವಿ
ನಾಳೆ ಬುಧವಾರ ಬರಬೇಕು
ಅಲ್ಲಿಂದ ಉತ್ತರದೇವಿ ಅಂಗಳಾವ ಇಳಿದಾಳೂ
ಅವರ ಭಾವಾನ ಪಾದಾಕೆ ಶರಣೆಂದು–ಏನೆಂದಾಳು
ಹೋತೀನಿ ಭಾವಯ್ಯ ತವರೀಗೆ
ಹೋಗಿ ಬಾರೆ, ಹೋಗಿ ಬಾರೆ ಹೊನ್ನೋಲೆ ಕಿವಿಯೋಳೆ
ನಾಗಭೂಷಣದ ನರಿಗ್ಯಾವಳೆ – ಉತ್ತರದೇವಿ
ತವರೊಳ್ಳೇದಂತ ಇರಬೇಡ –. ಉತ್ತರದೇವಿ
ನಾಳೆ ಬುಧವಾರ ಬರಬೇಕು[31]

ಅದೇ ರೀತಿ ಇವಳು ಪ್ರೀತಿಯಿಂದ ಸಾಕಿದ ಗಿಡಮರಗಳೂ ಇವಳನ್ನು ತವರೀಗೆ ಹೋಗುವುದು ಬೇಡವೆಂದು ಪ್ರಸ್ತಾಪಿಸುತ್ತಿವೆ.

ಕಿತ್ತಲಿ ನೀವು ಕೇಳಿ ಕಿತ್ತಲಿಯ ವನಕೇಳಿ
ನಾನು ಬಂದಾಗ ಸಸಿಗೋಳು
ಗೊಬ್ಬರವ ಹಾಕಿ ಸಲುಹಿದೆನು ವನಗಳಿರಾ
ಹೋತೀನಿ ನನ್ನ ತವರೀಗ'[32]

ಎಂದು ಉತ್ತರಾದೇವಿ ಹೇಳಿದ್ದಕ್ಕೆ ಅವು ಅವಳನ್ನು ತವರೀಗೆ ಹೋಗುವುದು ಬೇಡವೆಂದು ಪ್ರಸ್ತಾಪಿಸುತ್ತವೆ.

ನೀರ ಹುಯ್ಯುವರ್‍ಯಾರೆ, ಗೊಬ್ಬರ ಹಾಕುವರ್‍ಯಾರೆ
ಹಣ್ಣಾದರ್‍ಯಾರೆ ಮೆಲ್ಲುವರು[33]

ಪ್ರಕೃತಿಯೇ ಇವಳು ತೆಗೆದುಕೊಂಡ ನಿರ್ಧಾರ ಸರಿಯಲ್ಲ ಹೋಗುವುದು ಬೇಡ ಎಂದು ಹೇಳಿದರೂ ಅವಳು ತವರೀಗೆ ಹೋಗುತ್ತಾಳೆ.

ಉತ್ತರದೇವಿ ಶ್ರೀಮಂತ ಕುಟುಂಬದಿಂದ ಬಂದಿರುವಂತವಳು. ಇವಳು ಅತ್ತೆಯಾಡಿದ ಮಾತಿಗೆ ಸ್ವಲ್ಪ ಸಮಾಧಾನದಿಂದ ಉತ್ತರ ಕೊಡಬಹುದಾಗಿತ್ತೇನೋ ಆದರೆ ಅವಳು ಅಲ್ಲಿರಲು ಇಚ್ಚಿಸುತ್ತಿಲ್ಲ. ಅದಕ್ಕೆ ಅವಳ ಸ್ವಾಭಿಮಾನವು ಕಾರಣವಾಗಿರಬಹುದು. ಒಟ್ಟಿನಲ್ಲಿ ಉತ್ತರದೇವಿಯ ಶ್ರೀಮಂತಿಕೆಯೋ ಅಥವಾ ಸ್ವಾಭಿಮಾನವೋ ಅವಳನ್ನು ತವರೀಗೆ ಹೋಗಲು ಪ್ರೇರೇಪಿಸುತ್ತದೆ.

ಉತ್ತರದೇವಿ ತವರು ಮನೆಯ ಆಸೆಯನ್ನು ಹೊತ್ತುಕೊಂಡಿದ್ದಾಳೆ. ಆದ್ದರಿಂದ ಅವಳು ಸುಮ್ಮನೆ ಹಿಂದಿರುಗುತ್ತಿಲ್ಲ, ತನ್ನ ತವರು ಮನೆಯವರು ಮದುವೆಯ ಸಂದರ್ಭದಲ್ಲಿ ಕೊಟ್ಟಿದ್ದಂತಹ ಸಾಮಗ್ರಿಗಳನ್ನೆಲ್ಲಾ ಹಿಂದಕ್ಕೆ ಕೇಳುತ್ತಿದ್ದಾಳೆ. ಅವಳು ತವರಿಗೆ ಹೋಗಲು ದೃಢವಾಗಿ ನಿಶ್ಚಯಿಸಿದ್ದಾಳೆ. ಆದರೆ ಗಂಡನ ಮನೆಯನ್ನು ತೊರೆದು ತವರಿಗೆ ಬಂದರೆ ಅಲ್ಲಿ ಸಿಗುವ ಸ್ವಾಗತ ಯಾವ ರೀತಿಯದ್ದು ಎಂಬುದನ್ನು ಮರೆತು ಆತುರದ ಪರಿಸ್ಥಿಯಲ್ಲಿ ಅವಳು ನಿರ್ಧಾರವನ್ನು ಕೈಗೊಂಡಿದ್ದಾಳೆ. ಭಾವವೇಶಕ್ಕೆ ಒಳಗಾಗಿದ್ದಾಳೆ. ತಂದೆ, ತಾಯಿ, ಅಕ್ಕ, ತಮ್ಮ ಎಲ್ಲರ ಭಾವನೆಗಳು ಇವಳನ್ನು ಈ ರೀತಿ ಚಿಂತಿಸಲು ಪ್ರೇರೇಪಿಸಿದೆ. ಆದರೆ ಅವಳು ತವರು ಮನೆಗೆ ಬಂದಾಗ ಅನುಭವಿಸುವ ಅನುಭವಗಳೇ ಬೇರೆ ರೀತಿಯಾಗಿರುತ್ತದೆ. ಯಾರು ತನ್ನನ್ನು ರಕ್ಷಿಸುತ್ತಾರೆ ಎಂದು ನಂಬಿದ್ದಳೋ ಅವರೇ ಇವಳನ್ನು ರಕ್ಷಿಸಲು ಅಸಹಾಯಕರಾಗಿದ್ದಾರೆ.

ಇಲ್ಲಿ ಕಾವ್ಯ ಹೆಣ್ಣಿಗೆ, ಗಂಡನ ಆಸರೆ ಎಂದು ಹೇಳುತ್ತಿಲ್ಲ. ಜೊತೆಗೆ ಗಂಡು ಹೆಣ್ಣಿಗಾಸರೆ, ಹೆಣ್ಣು ಗಂಡಿಗಾಸರೆ ಎಂಬಂತೆ ಕಾವ್ಯ ಸೃಷ್ಟಿಗೊಂಡಿದೆ. ಅವಳು ಒಬ್ಬೊಬ್ಬರ ಮನೆಗೆ ಹೋದಾಗಲು ಅವರು ಕೊಡುವ ಉತ್ತರ ಸಮಂಜಸವಾಗಿದೆ. ಇದನ್ನು ಇಲ್ಲಿ ಅವಳಿಗೆ ಆಸರೆ ಸಿಗುತ್ತಿಲ್ಲ ಎಂಬುದಾಗಿ ಅರ್ಥಮಾಡಿಕೊಳ್ಳುವುದಕ್ಕಿಂತ (ಸಾಪ್ತಾಹಿಕ ಪುರವಣಿಯಲ್ಲಿ ತವರಿಗೆ ಬಂದ ಉತ್ತರದೇವಿಯೂ ತವರಿನ ಆಸರೆ ಇಲ್ಲದೆ ಆತ್ಮಹತ್ಯೆ ಮಾಡಿಕೊಂಡಲು ಎಂದು ತಿಳಿಸಿರುತ್ತಾರೆ). ಆದ್ದರಿಂದ ಕಾವ್ಯದ ಜೀವಾಳ ಏನು ಎಂಬುದನ್ನು ತಿಳಿಯಬೇಕಾಗಿದೆ.

ಅವಳನ್ನು ಗಂಡನ ಮನೆಗೆ ಹೋಗಲು ಪ್ರೇರೇಪಿಸುತ್ತಿದ್ದಾರೆಯೇ ಹೊರತು ಅವಳಿಗೆ ಆಸರೆ ಕೊಡುವುದಕ್ಕೆ ಸಾಧ್ಯವಾಗದ ಪರಿಸ್ಥಿತಿಯಲ್ಲ. ಅವಳು ಒಬ್ಬೊಬ್ಬರ ಮನೆಯ ಬಾಗಿಲಿಗೂ ಬಂದಾಗಲೂ ಅವರು ಕೊಡುವ ಉತ್ತರ ಎಷ್ಟು ಸಮಂಜಸವಾಗಿದೆ ಎಂಬುದನ್ನು ಅರ್ಥೈಸಿಕೊಳ್ಳಬಹುದು.

ಗಂಡನನ್ನು ತೊರೆದ ಹೆಣ್ಣನ್ನು ಸಮಾಜದಲ್ಲಿ ಯಾವ ರೀತಿ ಕಾಣುತ್ತಾರೆ. ಅಂದರೆ ಕಾವ್ಯದಲ್ಲಿ ಸಾಮಾಜಿಕ ವಿಮರ್ಶೆಯನ್ನು ಕಾಣಬಹುದು. ಅವಳು ತವರಿಗೆ ಹೋಗುವಾಗ ಒಂದೊಂದು ಊರಿನ ಗೌಡರು ಅವಳಿಗೆ ಬೆಲೆಕಟ್ಟಿ ತಮ್ಮ ಮನೆಯಲ್ಲಿರುವಂತೆ ಕರೆಯುತ್ತಾರೆ. ಇದು ಗಂಡನನ್ನು ತೊರೆದ ಹೆಣ್ಣನ್ನು ಪುರುಷರು ಎಷ್ಟು ಸ್ವೇಚ್ಛೆಯಾಗಿ ಕಾಣುತ್ತಾರೆ ಎಂಬುದನ್ನು ಕಾಣಬಹುದು. ಸಮಾಜ ಅವಳನ್ನು ಇನ್ನಷ್ಟು ಕಷ್ಟಕ್ಕೆ, ನೋವಿನ ಪರಿಸ್ಥಿಗೆ ತಳ್ಳುವಂತಹದ್ದು.

ಉತ್ತರದೇವಿ ಕೊನೆಗೆ  ತಾಯಿಯು ತಂದೆಯಿಂದ ಅನುಭವಿಸುತ್ತಿರುವ ಕಷ್ಟವನ್ನು ತಿಳಿದು, ಅವಳು ಹೇಳಿದ ರೀತಿಯಲ್ಲಿ ಹಂಪೆ ಹೊಳೆಗೋಗಿ ಆತ್ಮಾರ್ಪಣೆ ಮಾಡಿಕೊಂಡಿದ್ದನ್ನು ಕಥನ ಗೀತೆಯಲ್ಲಿ ಕಂಡುಬರುತ್ತದೆ.

ಉತ್ತರದೇವಿ ಗಂಡನ ಮನೆಯ ಆಸರೆಯ ಜೊತೆಗೆ ತವರು ಮನೆಯ ಆಸರೆಯೂ ದೊರೆಯದೆ ಅವಳು ಸಾವನ್ನಪ್ಪುತ್ತಾಳೆ ಎನ್ನುವ ತೀರ್ಮಾನಕ್ಕಿಂತಲೂ ಇದು ಒಂದು ಅನುಭವದ ತೀವ್ರತೆಯನ್ನು ಹೇಳುತ್ತಿದೆ. ಅವಳು ಸ್ವತಂತ್ರವಾಗಿ ಜೀವನ ನಡೆಸ ಬಹುದಾಗಿತ್ತು. ಯಾರ ಆಸರೆ ಇಲ್ಲದೆ ಬದುಕಲು ಅವಳು ಎಷ್ಟೆ ಬುದ್ಧಿವಂತಳಾಗಿದ್ದರು, ಆ ಒಂದು ಪರಿಸ್ಥಿತಿಯಲ್ಲಿ ಅವಳು ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ಈ ಸ್ವಭಾವ ಸ್ತ್ರೀಗೆ ಸ್ವಲ್ಪ ಹೆಚ್ಚಾಗಿದ್ದರೂ ಪ್ರತಿಯೊಬ್ಬ ಮನುಷ್ಯನು ಪರಿಸ್ಥಿಯ ಅನಿವಾರ್ಯಕ್ಕೆ ಸಿಕ್ಕಿ ಆ ಕ್ಷಣಕ್ಕೆ ಸರಿ ಎನ್ನುವ ನಿರ್ಧಾರವನ್ನು ಕೈಗೊಳ್ಳುವುದು ಸರ್ವೇಸಾಮಾನ್ಯವಾಗಿದೆ. ಇದನ್ನು ಪ್ರಸ್ತುತ ಪರಿಸ್ಥಿಗೂ ಅನ್ವಯವಾಗುವಂತಹದ್ದು. ಮನುಷ್ಯ ದುರ್ಬಲ ಕ್ಷಣಗಳಲ್ಲಿ ಸ್ವಲ್ಪ ಮಟ್ಟಿನ ದೃಢತೆಯನ್ನು ಪ್ರದರ್ಶಿಸಿದ್ದರೆ, ಆತ್ಮಹತ್ಯೆಯಂತಹ ಕ್ಷುಲ್ಲಕ ನಿರ್ಧಾರಗಳಿಂದ ಹೊರಗುಳಿಯಬಹುದಾಗಿತ್ತು.

ಉದಾಹರಣೆಗೆ ಪದ್ಮಪ್ರಿಯಳ ಆತ್ಮಹತ್ಯೆಯನ್ನು ತೆಗೆದುಕೊಂಡರೆ ಅವಳು ಶ್ರೀಮಂತರ ಕುಟುಂಬಕ್ಕೆ ಸೇರಿದವಳು, ಬುದ್ಧಿವಂತಳು, ಬಯಸ್ಸಿದ್ದರೆ ಎಲ್ಲರನ್ನು ತೊರೆದು ಜೀವನವನ್ನು ನಡೆಸಬಲ್ಲವಳಾಗಿದ್ದಳು. ಅಂದರೆ ಹಲವು ಅವಕಾಶಗಳಿದ್ದರೂ ಅದನ್ನೆಲ್ಲಾ ತೊರೆದು ಆತ್ಮಹತ್ಯಗೆ ಒಳಗಾಗುವ ಪರಿಸ್ಥಿತಿಗೆ ಸಿಲುಕಿದವಳು.

ಉತ್ತರದೇವಿ ಕಥನ ಕಾವ್ಯವೂ ಜೀವನದ ಇಂತಹ ಅನುಭವಗಳನ್ನು ಕುರಿತು ಕಟ್ಟಿರುವಂತಹದ್ದು. ಈ ಅನುಭವಗಳು ಯಾವ ಕಾಲದಲ್ಲಿಯೂ ಬದಲಾವಣೆಗಳಾಗುವುದಿಲ್ಲ. ಇಂತಹ ವಿಶಿಷ್ಟ ಅನುಭವಗಳನ್ನು ಜನಪದರು ಕಾವ್ಯವನ್ನಾಗಿಸಿದ್ದಾರೆ. ಜೊತೆಗೆ ಬದುಕಿನ ಬಗ್ಗೆ ತಿಳುವಳಿಕೆಯನ್ನು ಮೂಡಿಸುತ್ತದೆ. ಇಲ್ಲಿ ಸ್ತ್ರೀಗೆ ಯಾವುದೇ ರೀತಿಯ ಅವಕಾಶಗಳನ್ನು ಕೊಡದೆ ಅವಳನ್ನು ಶೋಷಿಸಲಾಗುತ್ತಿದೆ ಎಂಬುದಕ್ಕಿಂತ ಅರ್ಥಪೂರ್ಣವಾದ ಬದುಕಿನ ಅನುಭವದ ಸಂಘರ್ಷವನ್ನು ಚಿತ್ರಿಸುತ್ತಿದೆ ಎಂದು ಹೇಳಬಹುದು.

ಬದುಕಿನಲ್ಲಿ ಮನುಷ್ಯನಿಗೆ ಸಹನೆಯ ಮಹತ್ವವನ್ನು ಹೇಳುವುದರ ಜೊತೆಗೆ, ಹಠವಾಗಲಿ, ಆತುರದ ನಿರ್ಧಾರಗಳಾಗಲಿ ಸರಿಯಲ್ಲ ಎಂಬುದನ್ನು ತಿಳಿಸಲ್ಪಡುತ್ತದೆ. ಆದ್ದರಿಂದಲೇ ಇವು ಇಂದಿಗೂ ಪಠ್ಯಗಳಾಗಿರುವುದು. ಉತ್ತರದೇವಿಯ ಪಾತ್ರದಲ್ಲಿ ಒಂದು ವೇಳೆ ಅತಿಯಾದ ಸ್ವಾಭಿಮಾನ ಬಿಟ್ಟು ನೈಜ ವ್ಯವಸ್ಥೆಗೆ ಕುಟುಂಬದ ಎಲ್ಲಾ ವ್ಯಕ್ತಿಗಳ ಆಶಯಗಳೊಂದಿಗೆ ಹೊಂದಾಣಿಕೆ ಮಾಡಿಕೊಂಡಿದ್ದಲ್ಲಿ ಉತ್ತರದೇವಿಯ ಕಥೆ ದುರಂತವಾಗದೆ ತಾನೂ ಉಳಿದು ಇತರರು ಸಮಾಧಾನದಂತಿರುವಂತೆ ಮಾಡಬಹುದಾಗಿತ್ತು. ಬೇರೆಲ್ಲಾ ಪಾತ್ರಗಳು ಉತ್ತರದೇವಿಯ ಜೀವನವನ್ನು ತಮ್ಮೊಂದಿಗೆ ಬೆಸೆದುಕೊಳ್ಳುವಂತೆ ಪ್ರಯತ್ನಪಟ್ಟದ್ದರೂ ಉತ್ತರ ದೇವಿಯ ಮನಸ್ಥಿತಿ ಅದಕ್ಕೆಲ್ಲಾ ಹೊಂದಿಕೊಳ್ಳದೆ ಹೊಡೆದುಕೊಳ್ಳಲು ಪ್ರಯತ್ನಿಸಿರುವಂತೆ ಕಂಡುಬರುತ್ತದೆ. ಬೆಸೆಯುವುದು ಕಷ್ಟ ಹೊಡೆಯುವುದು ಸುಲುಭ ಎಂಬುದನ್ನು ನೋಡಬಹುದಾಗಿದೆ.

## ಹೊನ್ನಾಲಿ

ಹೊನ್ನಾಲಿ ಕಥನ ಗೀತೆ ಹೊನ್ನಾಲಿ ಆತ್ಮಹತ್ಯೆ ಮಾಡಿಕೊಂಡ ಜೊತೆಗೆ ಇಷ್ಟವಿಲ್ಲದ ಹೆಣ್ಣನ್ನು ಮದುವೆ ಮಾಡಿಕೊಂಡಂತಹ ಸಂದರ್ಭದಲ್ಲಿ ಅವಳನ್ನು ಯಾವ ರೀತಿ ನಡೆಸಿಕೊಳ್ಳುತ್ತಾರೆ ಮತ್ತು ಅವಳನ್ನು ಹಿಂಸಿಸದೆಯೇ ಅವಳನ್ನು ನೋವಿನ ಪರಿಸ್ಥಿಗೆ ಹೇಗೆ ಗುರಿಮಾಡುತ್ತಾರೆ ಎಂಬುದನ್ನು ಚಿತ್ರಿಸಿರುವ ಒಂದು ಸುಂದರವಾದ ಜನಪದ ಕಥನ ಗೀತೆ.

ಹೊನ್ನಾಲಿ ಹೊಸದಾಗಿ ಮದುವೆಯಾಗಿ ಗಂಡನ ಮನೆಗೆ ಬಂದಿರುವಂತವಳು ಎಂಬುದನ್ನು ಕಥನ ಗೀತೆ ಪ್ರಸ್ತುತ ಪಡಿಸುವುದನ್ನು ಕಥನ ಗೀತೆಯಲ್ಲಿ ಹೀಗೆ ಚಿತ್ರಿಸಿದ್ದಾರೆ. ಅವಳು ದನಕರುಗಳ ಹತ್ತಿರ ಕಸವನ್ನು ತಳ್ಳಿ ಅದನ್ನು ತಿಪ್ಪೆಗೆ ಹಾಕಲು ಅವರ ತಿಪ್ಪೆ ಯಾವುದೆಂದು ತಿಳಿರುವುದಿಲ್ಲ. ಆದ್ದರಿಂದ ಅವಳು ಕೇಳುತ್ತಾಳೆ ನಮ್ಮ ತಿಪ್ಪೆ ಯಾವುದೆಂದು ? ಇದನ್ನು ಕಥನ ಗೀತೆಯಲ್ಲಿ  ಈ ರೀತಿ ಕಾಣಬಹುದು.

ಹಾದಿಲ್ಯಾಗಾಡುವ ಮಕ್ಕಳಿರ ಸುವ್ವಲಾಲಿ
ನೀವು ಬೀದ್ಯಾಗ ಬೆಳೆಯುವ ಮಕ್ಕಳಿರ ಸುವ್ವಲಾಲಿ
ಬೀದ್ಯಾಗ ಬೆಳೆಯುವ ಮಕ್ಕಳಿರ ಸುವ್ವಲಾಲಿ
ನಮ್ಮ ತಿಪ್ಪೆ ತೋರಿಸಬನ್ನಿ ಸುವ್ವಲಾಲಿ[34]

ಎಂಬ ಸಾಲುಗಳು ಅವಳು ಹೊಸದಾಗಿ ಬಂದ ಸೊಸೆ ಎಂಬುದನ್ನು ವ್ಯಕ್ತಪಡಿಸುತ್ತಿವೆ.

ಹೊನ್ನಮ್ಮನ ಜೊತೆ ಮಾತನಾಡದೆ ಇರುವುದಕ್ಕೆ ಅವಳು ತಡವಾಗಿ ಎದ್ದಿರುವುದು ಒಂದು ನೆಪ ಮಾತ್ರ. ಆದರೆ ಇವಳನ್ನು ಯಾರು ಇಷ್ಟಪಡುತ್ತಿಲ್ಲ ಎಂಬುದನ್ನು ನೋಡಬಹುದು. ಹೊನ್ನಾಲಿ ಎಷ್ಟು ಪ್ರಯತ್ನಿಸುತ್ತಿದ್ದಾಳೆ ಅವರ ಜೊತೆ ಹೊಂದಾಣಿಕೆ ಮಾಡಿಕೊಳ್ಳಲು, ಆದರೆ ಇವಳು ಕೇಳಿದ ಒಂದು ಮಾತಿಗೂ ಅವರು ಸಹಕರಿಸುತ್ತಿಲ್ಲ. ಒಬ್ಬೊಬ್ಬರು ಒಂದೊಂದು ನೆಪವನ್ನು ಹೇಳುತ್ತಿದ್ದಾರೆ. ಆದರೂ ಸಹಿಸಿಕೊಂಡು ಮಾಡುವ ಗುಣ ಇವಳಲ್ಲಿ ಇದೆ. ಯಾರಾದರೂ ಸಗಣಿ ಹೊರ್ರು ಬನ್ನಿ ಎಂದು ಕೇಳಿದಾಗಲು ಯಾರು ಬರುವುದಿಲ್ಲ. ಆದರೂ ಅವಳು ಅದನ್ನು ಅಲ್ಲಿಗೆ ನಿಲಿಸಲಿಲ್ಲ. ಅವಳು ಶಿವ ಪಾರ್ವತಿಯರನ್ನು ನೆನಸಿಕೊಳ್ಳುತ್ತಾ, ಸಗಣಿಯನ್ನು ತಾನೊಬ್ಬಳೆ ಹೊತ್ತುಕೊಂಡು ಹೋಗಿ ತಿಪ್ಪಿಗೆ ಹಾಕುತ್ತಾಳೆ. ಕೈಗಳಿಗೆ ನೀರು ಕೊಡಲು ಎಲ್ಲರನ್ನು ಕೇಳುತ್ತಾಳೆ. ಯಾರೊಬ್ಬರು ಅವಳಿಗೆ ನೀರು ಕೊಡುವುದಿಲ್ಲ. ಆಗಲೂ ಅವಳು ಬೇಸರ ಮಾಡಿಕೊಳ್ಳದೆ ಮುಂದಿನ ಕೆಲಸದಲ್ಲಿ ತೊಡಗಿದ್ದಾಳೆ. ಇವಳು ಹೊಸ ಮನೆಗೆ

ಸೊಸೆಯಾಗಿ ಬಂದಿರುವುದರಿಂದ ಎಲ್ಲದ್ದಕ್ಕೂ ಆ ಮನೆಯವರ ಸಹಕಾರ ಬೇಕಾಗುತ್ತದೆ. ಆದರೆ ಯಾರು ಇವಳಿಗೆ ಸಹಕರಿಸುತ್ತಿಲ್ಲ. ಇವಳು ಅಡುಗೆ ಮಾಡಿ ಎಲ್ಲರನ್ನು ಊಟಕ್ಕೆ ಬನ್ನಿ ಊಟ ಮಾಡಿ ಎಂದು ಹೇಳುತ್ತಾಳೆ. ಯಾರೊಬ್ಬರು ಇವಳು ಮಾಡಿದ ಊಟವನ್ನು ತಿನ್ನುವುದಿಲ್ಲ. ಆದ್ದರಿಂದ ಬೇಸತ್ತ ಹೊನ್ನಾಲಿ ಆತ್ಮಾರ್ಪಣೆ ಮಾಡಿಕೊಂಡತಹ ಸನ್ನಿವೇಶವನ್ನು ಕುರಿತು ಕಥನ ಗೀತೆಯಲ್ಲಿ ಕಾಣಬಹುದು.

ಮನುಷ್ಯ ಎಷ್ಟೇ ಸಂಘಜೀವಿಯಾಗಿದ್ದರೂ, ಅವನು ಒಂಟಿ. ಅವನು ಎಷ್ಟೇ ಒಂಟಿಯಾಗಿದ್ದರೂ ಸಂಘಜೀವಿ ಎಂಬುದನ್ನು ತಿಳಿದಿರುವಂತಹ ನಾವು ಯಾವುದೊಂದು ದೊರೆಯದೇ ಹೋದಾಗ ಅವಳು ಸಾವಿಗೆ ಗುರಿಯಾದಂತ ಪರಿಸ್ಥಿತಿ ಇಲ್ಲಿ ನೋಡಬಹುದು.

ಯಾರಿಗೂ ಇಷ್ಟವಿಲ್ಲದ ಹೆಣ್ಣನ್ನು ಮದುವೆ ಮಾಡಿಕೊಂಡಂತ ಪರಿಸ್ಥಿತಿಯಲ್ಲಿ ಆ ಕುಟುಂಬದ ಸದಸ್ಯರು ಅವಳ ಜೊತೆ ನಡೆದುಕೊಳ್ಳುವ ಬಗೆಯನ್ನು ವ್ಯಕ್ತಪಡಿಸುತ್ತದೆ. ಇಂತಹ ದುಃಸ್ಥಿತಿಗೆ ಸಿಕ್ಕ ಹೆಣ್ಣು ಈ ಜೀವವೇ ಬೇಡವೆಂದು ಜೀವವನ್ನು ಕಳೆದುಕೊಳ್ಳುವ ಬಗೆಯನ್ನು ಚಿತ್ರಿಸುತ್ತದೆ.

ಕಥನ ಗೀತೆ ಹೊನ್ನಾಲಿ ಆತ್ಮಾರ್ಪಣೆ ಮಾಡಿಕೊಳ್ಳುವುದಕ್ಕೆ ಮುಕ್ತಾಯವಾಗುತ್ತಿಲ್ಲ. ಅದು ಮುಂದುವರೆಯುತ್ತದೆ. ತೋಟದಲ್ಲಿ ಕೆಲಸ ಮಾಡುತ್ತಿದ್ದ ಹೊನ್ನಾಲಿಯ ಗಂಡನಿಗೆ ಹೊನ್ನಾಲಿ ಅವನ ಕನಸ್ಸಿನಲ್ಲಿ ಬರುತ್ತಾಳೆ. ಆದ್ದರಿಂದ ಅವನು ಹೆಂಡತಿಯನ್ನು ಕಾಣಲು ಆತುರದಿಂದ ಮನೆಗೆ ಬರುತ್ತಾನೆ. ಮನೆಯಲ್ಲಿ ಎಲ್ಲರನ್ನು ಹೊನ್ನಾಲಿ ಎಲ್ಲಿ ಎಂದು ಕೇಳುತ್ತಾನೆ. ಅಷ್ಟೆ ಅಲ್ಲ ಅವಳು ನೀರಿಗೆ ಹೋಗಿರಬಹುದೆಂದು ನೀರಿಗೋಗೊ ಅಕ್ಕ ತಂಗಿಯರನ್ನೆಲ್ಲಾ ಕೇಳುತ್ತಾನೆ. ಸ್ವತಃ ಅವನೆ ಕೆರೆ ಬಾವಿಯಲೆಲ್ಲಾ ನೋಡಿ ಬರುತ್ತಾನೆ. ಎಲ್ಲೂ ಅವಳ ಸುಳಿವು ಸಿಗುವುದಿಲ್ಲ. ಕೊನೆಗೆ ಮನೆಗೆ ಬಂದು ಅಟ್ಟದ ಮೇಲೆ ನೋಡುತ್ತಾನೆ. ಅವಳು ನೇಣನ್ನು ಹಾಕಿಕೊಂಡಿರುತ್ತಾಳೆ.

ಗಂಡನಿಗೆ ತಾನು ಮಾಡಿದ ತಪ್ಪಿನ ಅರಿವಾಗುತ್ತದೆ. ಅವನು ಹೆಂಡತಿಗೆ ಸುಮಂಗಲಿಯ ರೀತಿಯಲ್ಲಿ ಶೃಂಗಾರ ಮಾಡುವುದನ್ನು ಕಂಡು ತಾಯಿ ಸತ್ತ ಹೆಣಕ್ಕೆ ಶೃಂಗಾರವೇಕೆ ಎಂದು ಕೇಳಿದರೂ ಸುಮ್ಮನಿರದೆ ಅವಳಿಗೆ ಶೃಂಗಾರವನ್ನು ಮಾಡಿಸುತ್ತಾನೆ. ಮಗ ದುಃಖಪಡುತ್ತಿರುವುದನ್ನು ಕಂಡು ತಾಯಿ 'ಮಗ ಸತ್ರೆ ಮನೆ ಹಾಳು, ಸೊಸೆ ಸತ್ರೆ ಸೋಬಾನೆ'[35] ಎಂದು ತಾಯಿ ಸಂತೈಸುತ್ತಿದ್ದಾಳೆ. ಹೆಂಡತಿಗೆ ಕಿಚ್ಚು ಹಾಕಲು ಶ್ರೀಗಂಧದ ಮರವನ್ನೆ ಕಡಿದು ತರುತ್ತಾನೆ. ಕಿಚ್ಚಿನ ಮೇಲೆ ಹೆಂಡತಿಯನ್ನು ಮಲಗಿಸಿ ಅವನು ಆ ಕಿಚ್ಚಿನಲ್ಲಿಯೇ ಪ್ರಾಣವನ್ನು ಕಳೆದುಕೊಳ್ಳುತ್ತಾನೆ. ತಾಯಿಯ ಒತ್ತಡದಲ್ಲಿ ನಿಜ ಪ್ರೀತಿ ತೆರೆದುಕೊಳ್ಳಲಾಗದೆ ತನಗೆ ತಾನೆ ಹಾರವಾಗುತ್ತಾನೆ.

ಕೈ ಹಿಡಿದ ಹೆಂಡತಿ ಯಾರಿಗೆ ಇಷ್ಟವಿಲ್ಲದಿದ್ದರೂ ಗಂಡನಾದವನು ಅವಳನ್ನು ಇಷ್ಟಪಡಬೇಕಾಗಿತ್ತು. ಆದರೆ ಗಂಡನೆ ಹೆಂಡತಿ ಮಾಡಿದ ಊಟವನ್ನು ನಿರಾಕರಿಸುತ್ತಾನೆ. ಅತಂಹ ಸಂದರ್ಭದಲ್ಲಿ ಬೇಸತ್ತ ಹೆಂಡತಿ ಆತ್ಮ ಹತ್ಯ ಮಾಡಿಕೊಂಡಿದ್ದಕ್ಕೆ ತಾನೇ ಕಾರಣನೆಂದು ಅವನು ಆ ಕಿಚ್ಚಿನಲ್ಲಿ ಆತ್ಮಾರ್ಪಣೆ ಮಾಡಿಕೊಳ್ಳುತ್ತಾನೆ.

ಟಿಪ್ಪಣಿಗಳು:

1. ಮಹಾಸತಿ ಆಚರಣೆ ಒಂದು ಅಧ್ಯಯನ, ಡಾ॥ ಬಸವರಾಜು ಕಲ್ಗುಡಿ, ಪುಟ ಸಂಖ್ಯೆ 3
2. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
3. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
4. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
5. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
6. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
7. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
8. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 170, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
9. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 171, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
10. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 171, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
11. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 171, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
12. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 171, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
13. ಕಿ.ರಂ.ನಾಗರಾಜ ಮತ್ತು ಡಾ॥ ಬಸವರಾಜು ಕಲ್ಗುಡಿ (ಸಂ), ಬಹುರೂಪಿ, ಕೆರೆಗೆ ಹಾರ, ಪುಟ ಸಂಖ್ಯೆ 171, ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ.
14. ತಲ್ವಾಡಿ ಜಿ.ಎಸ್ 'ಹೆಂಗಸರ ಹಾಡ್ಗತೆಗಳು', ಪುಟ ಸಂಖ್ಯೆ 13ಭಾವನಾ ಪ್ರಕಾಶನ, ಮೈಸೂರು 1985

15. ತಲ್ವಾಡಿ ಜಿ.ಎಸ್ 'ಹೆಂಗಸರ ಹಾಡ್ಗತೆಗಳು', ಪುಟ ಸಂಖ್ಯೆ 18 ಭಾವನಾ ಪ್ರಕಾಶನ, ಮೈಸೂರು 1985
16. ತಲ್ವಾಡಿ ಜಿ.ಎಸ್ 'ಹೆಂಗಸರ ಹಾಡ್ಗಗತೆಗಳು', ಪುಟ ಸಂಖ್ಯೆ 37 ಭಾವನಾ ಪ್ರಕಾಶನ, ಮೈಸೂರು 1985
17. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು, ಪುಟ ಸಂಖ್ಯೆ 34, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
18. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು, ಪುಟ ಸಂಖ್ಯೆ 35
19. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು, ಪುಟ ಸಂಖ್ಯೆ 35
20. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು, ಪುಟ ಸಂಖ್ಯೆ 35
21. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
22. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
23. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
24. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
25. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
26. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
27. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
28. ಜಿ.ಶಂ.ಪ, ಜಾನಪದ ಖಂಡ ಕಾವ್ಯಗಳು, ಶಾರದಾ ಮಂದಿರ, ಮೈಸೂರು
29. ಸುವರ್ಣ ಜನಪದ ಕಾವ್ಯ, (ಸಂ). ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ ಉತ್ತರ ದೇವಿಕಥನ ಕಾವ್ಯ, ಪುಟ ಸಂಖ್ಯೆ 635, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
30. ಸುವರ್ಣ ಜನಪದ ಕಾವ್ಯ, (ಸಂ). ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ ಉತ್ತರ ದೇವಿಕಥನ ಕಾವ್ಯ, ಪುಟ ಸಂಖ್ಯೆ 635, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
31. ಸುವರ್ಣ ಜನಪದ ಕಾವ್ಯ, (ಸಂ). ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ ಉತ್ತರ ದೇವಿಕಥನ ಕಾವ್ಯ, ಪುಟ ಸಂಖ್ಯೆ 636, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
32. ಸುವರ್ಣ ಜನಪದ ಕಾವ್ಯ, (ಸಂ). ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ ಉತ್ತರ ದೇವಿಕಥನ ಕಾವ್ಯ, ಪುಟ ಸಂಖ್ಯೆ 637, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
33. ಸುವರ್ಣ ಜನಪದ ಕಾವ್ಯ, (ಸಂ). ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ ಉತ್ತರ ದೇವಿಕಥನ ಕಾವ್ಯ, ಪುಟ ಸಂಖ್ಯೆ 638, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
34. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು ಪುಟ ಸಂಖ್ಯೆ 47, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
35. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಗೀತೆಗಳು ಪುಟ ಸಂಖ್ಯೆ 53, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು

## ಪಾತಿವ್ರತ್ಯ ಕೇಂದ್ರಿತ ಜನಪದ ಗೀತೆಗಳು

ಪುರಾಣದಿಂದಲೂ ಪಾತಿವ್ರತ್ಯಕ್ಕೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಲಾಗಿದೆ. ಪಾತಿವ್ರತ್ಯ ಎಂದಾಗ ಸುಳ್ಳಿನ ಆರೋಪಗಳನ್ನು ವರಿಸಿದಾಗ ಅವಳು ಸತ್ಯವಂತವಳಾಗಿದ್ದರೆ ಅವಳನ್ನು ಶಿವನೇ ಕಾಪಾಡುವಂತದ್ದು. ರಾಮಾಯಣದಲ್ಲಿ ಬರುವ ಸೀತೆ ಗಂಡನ ಜೊತೆಗೆ ಕಾಡಿಗೆ ಹೋಗುತ್ತಾಳೆ ಗಂಡನ ಕಷ್ಟಗಳನ್ನು ತನ್ನ ಕಷ್ಟಗಳೆಂದು ಪರಿಗಣಿಸುತ್ತಾಳೆ. ರಾವಣನಿಂದ ಅಪಹರಿಸಿದಾಗ ಅವಳು ಪಡುವ ಕಷ್ಟಗಳು ನಂತರ, ಅಯೋಧ್ಯೆಗೆ ಹಿಂದಿರುಗಿದಾಗ ಅವಳ ಶೀಲದ ಮೇಲೆ ಅನುಮಾನ ವ್ಯಕ್ತ ಪಡಿಸುವುದು ಇದರಿಂದ ಅಗ್ನಿ ಪ್ರವೇಶ ಮಾಡಿದಾಗ ಅವಳು ಸುಡದೇ ಬದುಕಿ ಉಳಿಯುವುದು ಇವನ್ನೆಲ್ಲ ನೋಡಿದಾಗ ಹೆಣ್ಣು ಎಷ್ಟೆಲ್ಲಾ ಕಷ್ಟಗಳಿಗೆ ಸಿಲುಕಿದರು ಅವಳ ಪತಿವ್ರತಾ ಧರ್ಮ ಅವಳನ್ನು ಕಾಪಾಡುತ್ತದೆ.

ಬೆಂಕಿಯಲ್ಲಿ ಆಹುತಿಯಾದಾಗ ಒಳ್ಳೆಯವರಾಗಲಿ, ಕೆಟ್ಟವರಾಗಲಿ ಸುಡುತ್ತಾರೆ ಎಂಬುದು ಸತ್ಯ. ಆದರೆ ಇದರ ಹಿಂದಿರುವ ನಂಬಿಕೆಯನ್ನು ಜನಪದರು ಜೀವನದ ಅನುಭವವನ್ನಾಗಿಸಿಕೊಂಡಿದ್ದಾರೆ. ಕಷ್ಟಗಳನ್ನು ಎದುರಿಸದ ಮನುಷ್ಯನೇ ಇಲ್ಲ. ಮನುಷ್ಯ ಅಂತಹ ಕಷ್ಟಗಳನ್ನು ಎದುರಿಸಿದಾಗ ಪ್ರಾಮಾಣಿಕನಾಗಿರ ಬೇಕು ಅಂತಃ ಪ್ರಾಮಾಣಿಕ ತನವೇ ಕೊನೆಗೆ ಅವನನ್ನು ಕಾಪಾಡುತ್ತದೆ. 'ಸತ್ಯ ಮೇವ ಜಯತೆ' ಎನ್ನುವ ನಾಣ್ಣುಡಿಯಂತೆ ಸತ್ಯವೇ ಗೆಲ್ಲುವಂತದ್ದು. ಸತ್ಯ ಎನ್ನುವುದು ನಿರಂತರವಾದುದ್ದು. ಸುಳ್ಳು ಆ ಕ್ಷಣಕ್ಕೆ ಗೆಲ್ಲಬಹುದು ಆದರೆ ಅದು ನಿರಂತರವಾದುದ್ದಲ್ಲ. ಕೊನೆಗಾದರು ಸತ್ಯ ತಿಳಿಯುತ್ತದೆ. ಆ ಸತ್ಯ ಮನುಷ್ಯನನ್ನು ಕಾಪಾಡುತ್ತದೆ ಎಂದು ಪ್ರಾಚೀನ ಕಾಲದಿಂದಲೂ ನಡೆದುಕೊಂಡು ಬಂದಿರುವಂತದ್ದು. ಇಂತಹ ಅಂಶಗಳನ್ನು ಜನಪದರು ತಮ್ಮ ಕಥನ ಗೀತೆಗಳಲ್ಲಿ ಕಥನವಾಗಿಸಿದ್ದಾರೆ.

ಪಾತಿವ್ರತ್ಯ ಕೇಂದ್ರಿತ ಜನಪದ ಗೀತೆಗಳಲ್ಲಿ ಮುಖ್ಯವಾಗಿ ಮಲ್ಲಿಗೆರಾಯ, ಗುಣಸಾಗರಿ ಕಥನ ಗೀತೆಗಳನ್ನು ನೋಡಬಹುದು. ಮಲ್ಲಿಗೆರಾಯ ಕಥನ ಗೀತೆಯಲ್ಲಿ ಮಲ್ಲಿಗೆರಾಯ ಮದುವೆಯಾಗಿ ಎಂಟು ದಿನಕ್ಕೆ ದಂಡಿಗೆ ಹೋಗುತ್ತಾನೆ. ಹೋಗುವಾಗ ತನ್ನ ತಾಯಿಗೆ ಅರಮನೆ. ಮಾಗ್ವಿ ಮಂಟಪ, ಗಂಧದಂತ ಗೌಡತಿಯನ್ನು ಜೋಪಾನವಾಗಿ ನೋಡಿಕೊಳ್ಳಲು ಎಚ್ಚರಿಸುತ್ತಾನೆ.

ಗಂಡ ದಂಡಿಗೆ ಹೋಗಿರುತ್ತಾನೆ, ಅತ್ತೆ ಸಂತೆಗೆ ಹೋಗಿರುತ್ತಾಳೆ, ಮಾವ ಘಟ್ಟಕ್ಕೆ ಹೋಗಿರುವಂತಹ ಸಂದರ್ಭದಲ್ಲಿ ಮೂಡಲ ಬೀದಿಯಲ್ಲಿ ಬಳೆಗಾರ ಶೆಟ್ಟಿ ಬಳೆ ಮಾರುವುದಕ್ಕೆ ಬಂದಿರುತ್ತಾನೆ. ಅಂತಹ ಸಂದರ್ಭದಲ್ಲಿಯೇ ಇವಳು ಬಳೆಗಾರ ಶೆಟ್ಟಿಯ

ಹತ್ತಿರ ಬಳೆಯನ್ನು ತೊಡಿಸಿಕೊಳ್ಳುತ್ತಾಳೆ. ಇದು ಗಂಡನಿಗೆ ಅನುಮಾನವಾಗಿ ಕಂಡುಬರುತ್ತದೆ.

ಬಳೆಗಾರ ಶೆಟ್ಟಿಯು ಬಳೆಯನ್ನು ತೊಡಿಸುತ್ತಾ ಅವರ ಅತ್ತೆ, ಮಾವ, ಗಂಡ ಎಲ್ಲಿಗೆ ಹೋಗಿದ್ದಾರೆಂದು ತಿಳಿದುಕೊಳ್ಳುತ್ತಾನೆ. ಒಂಟಿ ಹೆಣ್ಣು ಸಿಕ್ಕಾಗ ಅವಳನ್ನು ಯಾವರೀತಿ ಕಾಡುತ್ತಾರೆ ಎಂದು ನೋಡಬಹುದು. ಬಳೆಗಾರ ಶೆಟ್ಟಿಗೆ ಮುತ್ತು ರತ್ನ ಕೊಡುತ್ತೀನಿ ನೀನು ಹೋಗಪ್ಪಾ ಎಂದು ಹೇಳುತ್ತಾಳೆ. ಆದರೆ ಬಳೆಗಾರ ಶೆಟ್ಟಿ ಅವಳು ಕೊಡಲು ಇಚ್ಚಿಸಿದ ವಸ್ತುಗಳನ್ನೆಲ್ಲಾ ನಿರಾಕರಿಸುತ್ತಾನೆ. ಗೌಡತಿ ನಿನಗೆ ಏನು ಬೇಕು ಅದನ್ನಾದರೂ ಹೇಳು ಎಂದಾಗ ಬಳೆಗಾರ ಶೆಟ್ಟಿ ನಿನಗಂಡ ಕುಡಿಯೋ ಚಂಬು, ನಿನ ಗಂಡ ಉಣ್ಣೋ ತಟ್ಟೆ, ನಿನ ಗಂಡ ಮಲಗೋ ಮಂಚ ನನಗೀಗ ಆಗಬೇಕು ಎಂದು ಹೇಳುತ್ತಾನೆ. ಬಳೆಗಾರ ಶೆಟ್ಟಿ ಇದರಿಂದ ಅವಳ ಮುಂದಿನ ಜೀವನದ ಬಗ್ಗೆ ತಿಳಿದಿದೆ. ಇಂತಹ ಹೆಣ್ಣು ಮುಂದೆ ಸಮಾಜದಲ್ಲಿ ಎಂತಹ ಕಷ್ಟಕ್ಕೆ ಸಿಲುಕುತ್ತಾಳೆ ಎಂಬುದನ್ನು ತಿಳಿಯುವುದೇ ಇಲ್ಲ. ಅವರ ಮನಸ್ಸಿಗೆ ಆ ಕ್ಷಣ ಅನಿಸಿದ ಯೋಚನೆಗಳನ್ನು ಅವರು ಹೇಳುತ್ತರೆ. ಬಳೆಗಾರ ಶೆಟ್ಟಿಯಂತಹ ಕೈಯ್ಯಲ್ಲಿ ಸಿಕ್ಕಿದ ಹೆಣ್ಣು ಮಕ್ಕಳು ಪಡುವ ಆತಂಕ ಭಯಗಳನ್ನು ಕವಿ ಇಲ್ಲಿ ಕಟ್ಟಲ್ಪಟ್ಟಿದ್ದಾರೆ.

ಬಳೆಗಾರ ಶೆಟ್ಟಿ ಹೊರಟು ಹೋಗುತ್ತಾನೆ. ಅವಳ ಅತ್ತೆ ಮಾವ ಎಲ್ಲರೂ ಮನೆಗೆ ಹಿಂದಿರುಗುತ್ತಾರೆ. ಮಲ್ಲಮ್ಮ ಬಸುರಿಯಾಗಿರುತ್ತಾಳೆ. ಅವಳು ಬಳೆಗಾರ ಶೆಟ್ಟಿಗೆ ಬಸುರಿಯಾಗಿದ್ದಾಳೆ ಎಂದು ಊರಿನವರ ಮಾತನ್ನು ನಂಬಿದ ಗಂಡನಿಗೆ ಅವಳ ಮೇಲೆ ಅನುಮಾನ ಪ್ರಾರಂಭವಾಗುತ್ತದೆ. ಅವನು ನೇರವಾಗಿ ಬಂದು ಹೆಂಡತಿಯನ್ನು ಕೊಲ್ಲುವುದಿಲ್ಲ. ಗಂಡ ಬಂದಾಗ ಆರತಿಯನ್ನು ತೆಗೆದು ಕೊಂಡು ಹೋದಾಗ ಅದನ್ನು ನಿರಾಕರಿಸಿ ತನ್ನ ತಾಯಿಯಿಂದ ಆರತಿಯನ್ನು ತೆಗೆಸಿಕೊಂಡು ಅರಮನೆಗೆ ಬರುತ್ತಾನೆ. ಇವೆಲ್ಲ ಅವನಿಗೆ ಹೆಂಡತಿಯ ಬಗ್ಗೆ ಇರುವ ಅನುಮಾನಗಳೇ ಆಗಿವೆ.

ಅರಮನೆಗೆ ಬಂದಂತ ಮಗ ತಾನು ತನ್ನ ಅತ್ತೆ ಮನೆಗೆ ಹೆಂಡತಿಯನ್ನು ಕರೆದುಕೊಂಡು ಹೋಗುತ್ತೇನೆ ಎಂದು ತಂದೆ ತಾಯಿಗೆ ತಿಳಿಸುತ್ತಾನೆ. ಹೆಂಡತಿಯನ್ನು ಕರೆದುಕೊಂಡು ಅತ್ತೆ ಮನೆಗೆ ಹೋಗುವಾಗ ಇವಳನ್ನು ನಡೆಸಿಕೊಂಡು ಅವನು ಕುದುರೆಯ ಮೇಲೆ ಹೋಗುತ್ತಾನೆ. ಅವಳು ತನ್ನ ದುಃಖವನ್ನು ಈ ರೀತಿ ವ್ಯಕ್ತಪಡಿಸುತ್ತಾಳೆ. 'ಬೀಸುತ್ತೋಳು ಬೆರಗಾಯ್ತು, ನಡ್ದ ಕಾಲು ಹೊಡ್ಕ ಬಂದೊ ಸುಸ್ತುಪಟ್ಟು ನಡೆಸಳು'[1] ಎನ್ನುವ ಸಾಲುಗಳು ಗಂಡನ ಅನುಮಾನಕ್ಕೆ ಒಳಪಟ್ಟ ಹೆಂಡತಿ ಪಡುವ ದುಃಖದ ಸನ್ನಿವೇಶಗಳನ್ನು ತಿಳಿಯಪಡಿಸುತ್ತವೆ.

ದಾರಿಯ ಮಧ್ಯದಲ್ಲಿ ಊಟಮಾಡುವುದಕ್ಕೆ ಮರದ ನೆರಳಿನಲ್ಲಿ ಕುದುರೆಯನ್ನು ಕಟ್ಟಿ ಊಟಕ್ಕೆ ಕೂರುತ್ತಾರೆ. ಅವಳು ಒಂದು ತುತ್ತು ಎತ್ತಿಕೊಂಡತಹ ಸಂದರ್ಭದಲ್ಲಿ ಅವನು ಹೆಂಡತಿಯನ್ನು ಕಡಿದು ಹಾಕುತ್ತಾನೆ. ಅಷ್ಟೆ ಅಲ್ಲ ಹೊಟ್ಟೆಯಲ್ಲಿರುವ ಮಗುವನ್ನು ಬಗಿದು ತಗೆದು ಎಲೆ ಮೇಲೆ ಹಾಕುತ್ತಾನೆ. ಅಂದರೆ ಅವಳ ಮೇಲೆ ಮೂಡಿರುವ ಅವನ ಅನುಮಾನದ ಕ್ರೂರ ಯೋಚನೆ ಯಾವ ರೀತಿ ಎಂಬುದನ್ನು ತಿಳಿಯಬಹುದಾಗಿದೆ. ಇದನ್ನು ಕಾವ್ಯದ ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಒಂದು ತುತ್ತು ಎತ್ತಿದಳು
ಎತ್ತಿದಂತ ಹೊತ್ತಿನಲಿ
ಅವ್ನ ಕತ್ತೀಲಿ ಕಡಿದನು
ಹೊಟ್ಟೆನಾದ್ರು ಬಗಿದಾನು
ಮಗುನಾದ್ರು ತಗಿದಾನು
ಎಲೆಮ್ಯಾಲೆ ಹಾಕಿದನು[2]

ಎಂಬ ಸಾಲುಗಳು ಅವನ ಮನಸ್ಸಿನಲ್ಲಿರುವ ಕ್ರೂರ ಯೋಚನೆಯನ್ನು ವ್ಯಕ್ತಪಡಿಸುತ್ತವೆ.

ಮಲ್ಲಿಗೆರಾಯ ಮನೆಗೆ ಹಿಂದಿರುಗಿ ಬಂದಾಗ ಇಷ್ಟು ಬೇಗ ಬಂದ್ಯಪ್ಪ ಎಂದು ತಾಯಿ ಕೇಳುತ್ತಾಳೆ. ಅವನು ನಾನು ನೋಡಿಕೊಂಡು ಬಂದೆ ಎಂದು ಹೇಳಿದಕ್ಕೆ ತಾಯಿ ನಿನ್ನ ಹೆಂಡತಿ ಎಲ್ಲಿ ಬರಲಿಲ್ಲವ್ವ ಎಂದು ಕೇಳುತ್ತಾಳೆ. ಮಲ್ಲಿಗೆರಾಯ ತಾನು ಹೆಂಡತಿಯನ್ನು ಕಡಿದು ಹಾಕಿದ ವಿಷಯವನ್ನು ನೇರವಾಗಿ ತಿಳಿಸುವುದಿಲ್ಲ. ಅವಳು ತವರಿನಲ್ಲಿಯೇ ಉಳಿದುಕೊಂಡಳು ಎಂಬ ಮಾತನ್ನು ತಾಯಿಗೆ ಹೇಳುತ್ತಾನೆ. ನೀನು ಹೋಗಿ ಈಗ ಬಂದಿದ್ದಿಯಾ, ನೀನು ಹೇಳುತ್ತಿರುವ ಮಾತು ನಿಜವ. ನಿನ್ನತ್ತಿರ ಅವಳ ಗಂಟುಮೂಟೆ ಇದೆಯಲ್ಲ ಎಂದು ಕೇಳುತ್ತಾಳೆ. ಮಗನು ಮಾಡಿರುವ ಕೃತ್ಯದ ಬಗ್ಗೆ ತಾಯಿ ದುಃಖಪಡುತ್ತಾಳೆ. ಅವಳು ಈ ದುಃಖಕ್ಕೆ ಕಾರಣವಾದ ಬಳೆಗಾರ ಶೆಟ್ಟಿಗೆ ಶಾಪವನ್ನು ಹಾಕುತ್ತಾಳೆ.

ಮಲ್ಲಮ್ಮನ ಅತ್ತೆ ಹಾಕುತ್ತಿರುವ ಶಾಪವನ್ನು ಕೇಳಿದ ಬಳೆಗಾರ ಶೆಟ್ಟಿಗೆ ಅದನ್ನು ಸಹಿಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ನನ್ನ ಕೃತ್ಯದ ಫಲವಾಗಿ ಮಲ್ಲಮ್ಮ ಎಂತಹ ಕಷ್ಟಕ್ಕೆ ಸಿಲುಕಿಕೊಂಡಳು ಎಂದು ಯೋಚಿಸುತ್ತಾನೆ. ಮಲ್ಲಮ್ಮನನ್ನು ಕಡಿದು ಹಾಕಿದ್ದ ಸ್ಥಳಕ್ಕೆ ಹೋಗಿ ದುಃಖವನ್ನು ಪಡುತ್ತಾನೆ. ಅವನು ಎಷ್ಟು ದುಃಖಪಡುತ್ತಾನೆ ಎಂದರೆ ಪಾರ್ವತಿ ಪರಮೇಶ್ವರೆ ಪ್ರತ್ಯಕ್ಷವಾಗಿ ಅವನ ಕಷ್ಟ ಏನು ಎಂದು ಕೇಳುತ್ತಾರೆ. ಅವನು ತಾಯಿ ಮಗುವಿನ ಜೀವವನ್ನು ಉಳಿಸಿಕೊಡುವಂತೆ ಕೇಳಿಕೊಳ್ಳುತ್ತಾನೆ. ಅದೇ ರೀತಿ ಅವಳಿಗೆ ಅರಮನೆ ಐಶ್ವರ್ಯವನ್ನೆಲ್ಲಾ ಕೊಟ್ಟು ಹೋಗುತ್ತಾರೆ.

ಮಲ್ಲಮ್ಮ ಪಾರ್ವತಿ ಪರಶಿವರಿಂದ ಜೀವವನ್ನು ಪಡೆದುಕೊಳ್ಳುತ್ತಾಳೆ. ಬಳೆಗಾರ ಶೆಟ್ಟಿ ಅರಮನೆಯಲ್ಲಿ ಸಂತೋಷವಾಗಿರು ಎಂದು ಹೇಳುತ್ತಾ ಅವನು ಹೊರಟು ಹೋಗುತ್ತಾನೆ. ಮಲ್ಲಮ್ಮ ಆ ಅರಮನೆಯಲ್ಲಿ ಜೀವನ ನಡೆಸುತ್ತಿರುವಾಗ ಮಲ್ಲಿಗೆರಾಯ ಹನ್ನೆರಡು ವರ್ಷ ಆದಮೇಲೆ ತನ್ನ ಹೆಂಡತಿಯನ್ನು ಕಡಿದುಹಾಕಿದಂತಹ ಜಾಗವನ್ನು ನೋಡಬೇಕೆಂದು ಬರುತ್ತಾನೆ. ಅವನು ಕಡಿದು ಹಾಕಿದ ಜಾಗದಲ್ಲಿ ಅರಮನೆ ರೂಪುಗೊಂಡಿರುತ್ತದೆ. ಮಕ್ಕಳಾಡೋ ಸ್ಥಳದಂತೆ ಅದು ಕಂಡು ಬರುತ್ತದೆ. ಮಲ್ಲಿಗೆರಾಯ ನಾನು ಅಲ್ಲಿಗೆ ಹೋಗಬೇಕು, ನೋಡಿಬರಬೇಕು ಎಂದು ಹೋದಾಗ ಅದರೊಳಗೆ ಇದ್ದಂತಹ ಇವನ ಹೆಂಡತಿ ಮಗುವನ್ನು ತೂಗುತ್ತಿರುತ್ತಾಳೆ. ಕೊನೆಯಲ್ಲಿ ಬರುವ ಸಾಲುಗಳು ಅವಳ ಮನಸ್ಸಿನ ಭಾವನೆಗಳನ್ನು ವ್ಯಕ್ತಪಡಿಸುತ್ತವೆ.

ನಾನು ಮಾಡಿದ ನ್ಯಾಯ ದುರಿದುರ್‍ಯೋ
ನೀ ಕೇಳಪ್ಪ ಕಂದಯ್ಯ ದುರಿದುರ್‍ಯೋ
ಮದುವ್ಯಾಗಿ ಎಂಟುಜಿನ ದುರಿದುರ್‍ಯೋ
ಒಸಗ್ಯಗಿ ಮೂರುಜಿನ ದುರಿದುರ್‍ಯೋ
ಮಲ್ಲಿಗುರಾತನ್ತಾಕೆ ದುರಿದುರ್‍ಯೋ[3]

ಎಂಬ ಸಾಲುಗಳು ಅವಳು ಅನುಭವಿಸಿದ ದುಃಖತಪ್ತ ಭಾವನೆಗಳನ್ನು ತನ್ನ ಮಗುವಿಗೆ ಹೇಳುವುದು ಅವಳ ಮನಸ್ಸಿನ ನೋವನ್ನು ಹೀಗೆ ಸ್ವಗತದ ರೀತಿಯಲ್ಲಿ ಹಾಡಿಕೊಳ್ಳುತ್ತಾಳೆ. ಮಲ್ಲಗೆರಾಯ ಹೆಂಡತಿ ಹೇಳುತ್ತಿರುವ ಮಾತನ್ನು ಕೇಳಿದಾಗ ಅವನು ಮಾಡಿದ ತಪ್ಪಿನ ಅರಿವಾಗಿ ನಂತರ ಅವನು ಹೆಂಡತಿಯ ಜೊತೆ ಕೂಡಿ ಬಾಳುತ್ತಾನೆ.

ಗಂಡನ ಅನುಮಾನಕ್ಕೆ ಒಳಗಾದಾಗ ಹೆಣ್ಣು ಪಡುವ ಕಷ್ಟಗಳನ್ನು ಚಿತ್ರಿಸುವುದರ ಜೊತೆಗೆ ಅವಳು ಮನೆಯಲ್ಲಿ ಯಾರು ಇಲ್ಲದಂತ ಸಂದರ್ಭದಲ್ಲಿ, ಅನ್ಯ ಪುರುಷರ ಜೊತೆ ವ್ಯವಹರಿಸಿದ್ದು ಅನುಮಾನವಾಗಿ ರೂಪುಗೊಂಡಿದೆ. ಮನೋವ್ಯಾದಿಯಲ್ಲಿಯೇ ಅತ್ಯಂತ ಅಪಾಯಕಾರಿಯಾದದ್ದು ಅನುಮಾನ. ಪುರುಷರನ್ನು ಅನುಮಾನಿಸುವು ದಕ್ಕಿಂತಲೂ ಸ್ತ್ರೀಯನ್ನೆ ಹೆಚ್ಚು ಅನುಮಾನಿಸುವ ಸಂದರ್ಭಗಳು ವ್ಯಾಪಕವಾಗಿರುವುದನ್ನು ಕಾಣಬಹುದು. ಮಲ್ಲಿಗೆರಾಯನ ಅನುಮಾನವಾದರೂ ಒಂದೇ ಬಾರಿಗೆ ಅವಳನ್ನು ಕಡಿದು ಹಾಕಿದ, ಆದರೆ ಇಂತಹ ಅನುಮಾನಕ್ಕೆ ಒಳಪಟ್ಟ ಮನುಷ್ಯರು ಪ್ರತಿಯೊಂದು ಕ್ಷಣದಲ್ಲಿಯೂ ಅನುಮಾನಿಸುವುದು. ಇಂತಹ ಅನುಮಾನಕ್ಕೆ ಒಳಪಟ್ಟಾಗ ಅನುಭವಿಸುವ ದುಃಖ ವ್ಯಾಪಕವಾದದ್ದು. ಇಂತಹ ಜೀವನಕ್ಕೆ ಮನುಷ್ಯ ಒಳಗಾದಾಗ ಅವರು ಪಡುವ ಯಾತನೆಗಳನ್ನು ಇಲ್ಲಿ ಕವಿ ಸಮೂಹ ಕಾವ್ಯವನ್ನಾಗಿಸಿದ್ದಾರೆ.

## ಗುಣಸಾಗರಿ

'ಗುಣಸಾಗರಿ' ಕಥನ ಗೀತೆಗಳಲ್ಲಿ ಅತ್ಯಂತ ವಿಶಿಷ್ಟವಾದದ್ದು. ಕೌಟುಂಬಿಕ ಕತೆಯೇ ಅತ್ಯತ್ತಮ ಖಂಡಕಾವ್ಯದ ವ್ಯಾಪ್ತಿಯನ್ನು ಪಡೆದುಕೊಳ್ಳುವುದು ಇಲ್ಲಿನ ವೈಶಿಷ್ಟ್ಯ ಗುಣಸಾಗರಿ ಕಥನ ಗೀತೆಯನ್ನು ಓದುತ್ತಾ ಹೋದಂತೆ ಒಂದು ಕಾದಂಬರಿಯ ಅನುಭವದ ರೂಪವನ್ನು ಇದು ಪಡೆದುಕೊಳ್ಳುತ್ತದೆ ಎಂದು ಹೇಳಬಹುದು. ವ್ಯಾಪ್ತಿಯ ದೃಷ್ಠಿಯಿಂದ ಹಿಡಿದು, ಸಂಕೇತಗಳ ಮೂಲಕ ಇದು ಸೂಚಿಸುವ ಅರ್ಥ ತುಂಬ ಮೌಲ್ಯವುಳ್ಳದ್ದು. ಅಷ್ಟೆ ಅಲ್ಲದೆ ಅನೇಕ ಮಾಹಿತಿಗಳನ್ನು ಈ ಕಥನ ಗೀತೆಯಿಂದ ಪಡೆಯಬಹುದಾಗಿದೆ.

ಬಾಲ್ಯ ವಿವಾಹ ಪದ್ದತಿ ರೂಢಿಯಲ್ಲಿದ್ದಿತು ಎಂಬುದಕ್ಕೆ ಇದರಿಂದ ಆಧಾರವನ್ನು ಪಡೆಯಬಹುದಾಗಿದೆ.

ಆರು ವರ್ಸಾದ ಗಂಡಿಗೆ
ಮೂರು ವರ್ಸಾದ ಹೆಣ್ಣಿಗೆ
ತಾಯ್ತಂದೆ ತಮ್ಮ ಅರ್ತಿಂದ
ತಾಯ್ತಂದೆ ತಮ್ಮ ಅರ್ತಿಂದ ಗುಣಸಾಗ್ರನ
ಮೋವಕೆ ಧಾರೆ ಯರುದಾರೆ[4]

ಬಾಲ್ಯ ವಿವಾಹ ಪದ್ದತಿ ಚಾಲ್ತಿಯಲ್ಲಿದಿದ್ದನ್ನು ನೋಡಬಹುದು. ಮದುವೆಯ ಸಂದರ್ಭದಲ್ಲಿ ಮಾತುಕತೆಯ ವಿಚಾರಗಳು, ಅದರಲ್ಲೂ ಈಗಿನ ವರದಕ್ಷಿಣೆಗಿಂತ ಆಗಿನ ವಧುದಕ್ಷಿಣೆ, ಹೆಣ್ಣನ್ನು ಗೊತ್ತುಮಾಡಿಕೊಳ್ಳುವ ವಿಶಿಷ್ಟ ಅಂಶಗಳನ್ನು ಕಥನ ಗೀತೆಯ ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಹತ್ತು ವರ್ಸಾದ ಹಿರಿಯೋರು ಐದು ವರ್ಸಾದ ಕಿರಿಯೋರು
ಎಂಬತ್ತು ವರ್ಸಾದ ಶರಣಾರು। ಗಣಾಂಗಳ
ಹೋದಾರು ಚೆನ್ನಮ್ಮನ ಅರಮನೆಗೆ
ಹೋದಾಂತ ಶರಣಂಗೆ ಗಿಂಡಿಲಿ ನೀರು ಕೊಟ್ಟು
ಕುಂಡ್ರಾಕಿ ಜಾಡಿ ಮಣೆಮ್ಯಾಲಿ। ಗಣಾಂಗಳ
ಬಂದ ಕಾರ್ಯವು ಒಡದ್ಹೇಳಿರಿ
ಬಂದೇನ ಕಾರ್ಯವು ಒಡದ್ಹೇಳಿರಿ ಅಂದಾರೆ
ಆಡಾಳು ಗುಣಸಾಗ್ರನ ಕೊಡಬೇಕು
ಅವ್ರಮ್ಮಗೊಂದು ಸೀರೆ ಅವ್ರಪ್ಪಗೊಂದು ಅಚ್ಚಾಡ
ಸೋದರ ಮಾವಗೆ ಉಡುಗೊರೆ। ತಂದರೆ

ಆಡಾಳು ಗುಣಸಾಗ್ರನ ಕೊಡ್ತಿವಿ[5]

ಹಾಗೆ ಮದುವೆಯಾದ ಸಂದರ್ಭದಲ್ಲಿ ಕುಟುಂಬದಿಂದ ಬೇರೆಯಾಗಿ ಹೊಸ ಸಂಸಾರವನ್ನು ಹೂಡುವುದು. ತಾಯಿ ಮೊದಲು ಇದರ ಬಗ್ಗೆ ಕೋಪಗೊಂಡರು ನಂತರ ಸುಖವಾಗಿ ಬಾಳು ಎಂದು ಆಶಿಸುವುದು. ಹೇಗೆ ತಾಯಿ ಆ ಸಂದರ್ಭದಲ್ಲಿ ಅವಳಿಗೂ ಸಹ ಮಗನ ಅಗಲಿಕೆ ನೋವನ್ನು ತಂದರೂ, ನಂತರ ಅವಳು ಅವನನ್ನು ಮಡದಿಗೆ ಬಿಟ್ಟುಕೊಡುವ ಸಂದರ್ಭಗಳು ತುಂಬ ಔಚಿತ್ಯವಾಗಿ ಕಂಡುಬಂದಿದೆ.

ಗುಣಸಾಗರಿಯ ಗಂಡ ಮಲ್ಲಶೆಟ್ಟಿ ಮದುವೆಯಾದ ಮೊದಲ ಹಂತದಲ್ಲೇ ಅಗಲಬೇಕಾಗುತ್ತದೆ. ಮುತ್ತಿನ ವ್ಯಾಪಾರಿಯಾದ ಅವನು ತನ್ನ ಮುದ್ದು ಮಡದಿಯನ್ನು ತೊರೆದುಹೋದರೂ ಅವರಿಗೆ ಬೇಕಾದ ಅನುಕೂಲಗಳನ್ನು ಕಲ್ಪಿಸಿರುತ್ತಾನೆ. ಹೆಂಡತಿಗೆ ಯಾರ ಹಂಗೂ ಇಲ್ಲದಿರಲೆಂದು ಬೇರೊಂದು ಮನೆಯನ್ನು ಮಾಡಿ ಬಿಟ್ಟುಹೋಗಿರುತ್ತಾನೆ. ಆದರೂ ಅವಳು ಸುಖವಾಗಿರಲು ಸಾಧ್ಯವಾಗುವುದಿಲ್ಲ. ಅದಕ್ಕೆ ಕಾರಣಗಳನ್ನೂ ಕಥನ ಕಾವ್ಯ ಪ್ರಶ್ನಿಸುತ್ತಿದೆ. ಇಲ್ಲಿ ಪತಿವ್ರತೆಯಂತೆ ಕಟಲ್ಪಟ್ಟಿದ್ದರೂ, ಅವಳು ನಿಜವಾಗಿ ಪತಿವ್ರತೆಯಾದರೂ, ಅವಳ ಮೇಲೆ ಮೂಡಿದ್ದ ನಿರುವಾಳನ ದುರಾಸೆ ಅವಳನ್ನು ಈ ಪರಿಸ್ಥಿತಿಗೆ ಕೊಂಡೊಯುತ್ತಿರುವುದನ್ನು ನೋಡಬಹುದು.

ಗಂಡನಾದವನು ಅನುಮಾನಿಸುವುದಕ್ಕಿಂತಲೂ ಈ ಕಥನದಲ್ಲಿ ಇಲ್ಲಕ್ಕ, ಮಲ್ಲಕ್ಕ ಎಂಬ ನಾದಿನಿಯರು ಮತ್ತು ಮೈದನಾದ ನಿರುವಾಳರ ಕೆಟ್ಟ ಮನಸುಗಳಿಂದ ಕೂಡಿದ ಈ ವ್ಯಕ್ತಿಗಳ ಕೈಯಲ್ಲಿ ಸಿಲುಕಿದ ಗುಣಸಾಗರಿಯು ಪಡುವ ನೋವುಗಳನ್ನು ವ್ಯಕ್ತಪಡಿಸುತ್ತವೆ.

ನಿರುವಾಳ ಗುಣಸಾಗರಿ ಮದುವೆಯ ಸಂದರ್ಭದಲ್ಲಿ ಅವಳನ್ನು ಇಷ್ಟಪಡುತ್ತಿರುತ್ತಾನೆ. ಆದರೆ ಗುಣಸಾಗರಿಯನ್ನು ಮಲ್ಲಶೆಟ್ಟಿಗೆ ಮಾತುಕತೆಯಾಗಿರುತ್ತದೆ. ಅವನ ನೀಚಾಳ ಬುದ್ಧಿಯೇ ಗುಣಸಾಗರಿಯನ್ನು ಕಷ್ಟದ ಪರಿಸ್ಥಿತಿಯಲ್ಲಿಡಲು ಪ್ರೇರೇಪಿಸಿರಬಹುದು. ಗುಣಸಾಗರಿ ಮಲ್ಲಣ್ಣನ ಮದುವೆಯ ಸಂದರ್ಭದಲ್ಲಿ ನಿರುವಾಳ ಆಡುವ ಮಾತುಗಳು ಅವನ ಮನಸ್ಸಿನಲ್ಲಿರುವ ನೀಚತನವನ್ನು ವ್ಯಕ್ತಪಡಿಸುತ್ತವೆ.

ಬಂದಾನು ನಿರುವಾಳ ನಿಂದಾನು ಚಪ್ಪರದಡಿ
ಏನಂದು ಅವನು ಕೇಳುತ್ತಾನೆ। ನಿರುವಾಳ
ಚಿಕ್ಕೋಳು ಗುಣಸಾಗರಿ ನನಗಿರಲಿ[6]

ಅದೇ ರೀತಿ ಮಲ್ಲಶೆಟ್ಟಿ ಘಟ್ಟಕ್ಕೆ ಹೋಗುವಾಗ ತಾಯಿಗೆ ಗುಣಸಾಗರಿಯನ್ನು ಚೆನ್ನಾಗಿ ನೋಡಿಕೊಳ್ಳುವಂತೆ ತಿಳಿಸುತ್ತಾ, ಮನೆಯಲ್ಲಿರುವಂತಹವರ ಬಗ್ಗೆ ತಿಳಿಸಿಕೊಡುತ್ತಾನೆ.

ಇಲ್ಲಕ್ಕ ಒಳ್ಳಯವಳಲ್ಲ, ಮಲ್ಲಕ್ಕ ಒಳ್ಳೆಯವಳಲ್ಲ
ತಮ್ಮ ನಿರುವಾಳ ಒಳ್ಳೆಯವನಲ್ಲ
ತಮ್ಮನೇ ನಿರುವಾಳ ಒಳ್ಳೆಯವನಲ್ಲ। ನನ್ನಮ್ಮ
ನಮ್ಮಂತೆ ನೋಡಿ ಸಲುವಮ್ಮ[7]

ಎಂಬ ಸಾಲುಗಳು ಇವರ ನೀಚಬುದ್ಧಿಯನ್ನು ತಿಳಿಯಪಡಿಸುತ್ತವೆ ಮತ್ತು ಗುಣಸಾಗರಿ ಕಾಡಿನಲ್ಲಿ ಮುದ್ದಣ್ಣನ ಆಶ್ರಯ ಪಡೆದುಕೊಂಡಾಗ ನಿನ್ನ ಈ ಕಷ್ಟಕ್ಕೆ ಕಾರಣರಾರು ಎಂಬ ಪ್ರಶ್ನೆಗೆ ಗುಣಸಾಗರಿ ಕೊಡುವ ಉತ್ತರ ಸಾಂಕೇತಿಕ ರೂಪದಲ್ಲಿ ವ್ಯಕ್ತಪಡಿಸುತ್ತಾರೆ. ಜನಪದರು ಸಹ ಸಂಕೇತಗಳನ್ನು, ಉಪಮೆಗಳನ್ನು ಯಾವ ರೀತಿ ಕಾವ್ಯಗಳಲ್ಲಿ ಬಳಸಿದ್ದಾರೆ ಎಂಬುದನ್ನು ತಿಳಿಯಬಹುದು.

ಅತ್ತೆನು ಅಂಬ್ಲಿಲ್ಲ ಮಾವೇನು ಅಂಬ್ಲಲ್ಲ
ನಸುಗುನ್ನಿಯಂತೋರು ನಾದುನಿಯೋರು[8]

ಎಂಬ ಸಾಲುಗಳು 'ನಸುಗನ್ನಿ' ಕಾಯಿ ಸದಾ ಇನ್ನೊಬ್ಬರ ಬದುಕಿಗೆ ಕಷ್ಟವನ್ನು ತಂದೊಡ್ಡುವಂತದ್ದೆ ಈ ಗಿಡದ ವಿಶೇಷ. ಆದ್ದರಿಂದ ಇಲ್ಲಕ್ಕ ಮಲ್ಲಕ್ಕರ ಸ್ವಭಾವವನ್ನು ಈ ಗಿಡಕ್ಕೆ ಹೋಲಿಸಿರುವುದನ್ನು ನೋಡಬಹುದು.

ಆಧುನಿಕ ಯುಗದಲ್ಲೂ ಅನೇಕ ಪರೀಕ್ಷೆಗಳ ಮೂಲಕ ಸತ್ಯವನ್ನು ಕಂಡರು ಅದನ್ನು ಕಂಡುಕೊಳ್ಳುವವರೆಗೆ ಆ ಮಧ್ಯೆ ಅವಳು ಅನುಭವಿಸುವ ಯಾತನೆಯೇ ವಿಚಿತ್ರವಾದದ್ದು. ಆಧುನಿಕತೆ ಮುಂದುವರೆದರೂ ಇಂತಹ ಸಂದರ್ಭದಲ್ಲಿ ಅವಳು ಒಂದಲ್ಲ ಒಂದು ರೀತಿಯಲ್ಲಿ ನೋವನ್ನನುಭವಿಸಲೇಬೇಕಾದ ಪರಿಸ್ಥಿತಿಯನ್ನು ಕಾಣಬಹುದು.

ಗುಣಸಾಗರಿಯನ್ನು ಬಿಟ್ಟು, ಮುತ್ತು ತರಲು ಹೋಗುವುದು ಬೇಡವೆಂದು ತಾಯಿ ಹೇಳಿದರೂ ಮಲ್ಲಶೆಟ್ಟಿ ಒಪ್ಪದೆ, ಮುತ್ತು ತರಲು ಘಟ್ಟಕ್ಕೆ ಹೋಗುವುದು. ಅದೇ ರೀತಿ ಬಾಗಿಲಲ್ಲಿ ಹಲ್ಲಿ ನುಡಿಯುವುದು. ಇವನು ಘಟಕ್ಕೆ ಹೋಗುವುದು ಬೇಡವೆಂದು ತಿಳಿಸುತ್ತವೆ. ಆದರೆ ಅವು ಯಾವುವು ಇವನನ್ನು ನಿಲ್ಲಿಸುವಷ್ಟು ಶಕ್ತಿಶಾಲಿಯಾದವುಗಳಾಗುವುದಿಲ್ಲ.

ಮಲ್ಲಶೆಟ್ಟಿ ಘಟ್ಟಕ್ಕೆ ಹೋದ ದಿನವೆ ಗುಣಸಾಗರಿ ಮೈನೆರೆಯುತ್ತಾಳೆ. ಇವಳು ಮೈನೆರೆದ ವಿಷಯ ಗೀಜುಗ ಪಕ್ಷಿಗಳಿಂದ ತಿಳಿದು ಮಲ್ಲಶೆಟ್ಟಿ ಮರಳಿ ಬಂದು ಒಂದು ರಾತ್ರಿ ಅವಳೊಡನೆ ಇದ್ದು ತೆರಳುತ್ತಾನೆ. ಗೀಜುಗ ಪಕ್ಷಿಗಳ ಅದ್ಭುತ ಕಲ್ಪನೆ ಜನಪದ ಕವಿಯು ಬಳಸಿರುವ ಗಮನಾರ್ಹ ಅಂಶವಾಗಿದೆ.

ಗಂಡ ಜೊತೆಯಲ್ಲಿರುವುದಿಲ್ಲ, ಅಂತಹ ಪರಿಸ್ಥಿತಿಯಲ್ಲಿ ಕ್ಷುಲಕ ವ್ಯಕ್ತಿಗಳಿಂದ ದುರಂತಕ್ಕೆ ಒಳಗಾಗುವ ಗುಣಸಾಗರಿಯ ಬದುಕನ್ನು ನೋಡಿದರೆ ಒಳ್ಳೆಯವರ ಬದುಕು ಹೇಗೆ ಕ್ಷುಲ್ಲಕ ವ್ಯಕ್ತಿಗಳಿಂದ ದುರಂತವನ್ನಪ್ಪುತ್ತದೆ ಎನ್ನುವ ವಾಸ್ತವದ ಅಂಶವನ್ನು ತಿಳಿಯಬಹುದಾಗಿದೆ.

ಸತ್ಯ ಮೇವ ಜಯತೇ ಎಂಬ ನಾಣ್ಣುಡಿಯಂತೆ ಸತ್ಯದ ಅರಿವು ಎನ್ನುವುದು ಅಷ್ಟು ಸುಲಭವಾಗಿ ದೊರೆಯುವಂತಹದಲ್ಲ. ಸತ್ಯವನ್ನು ಕಾಣಬೇಕಾದರೆ ಕಷ್ಟದ ಅನುಭವದಿಂದಲೇ ಸಾಧ್ಯ. ಪ್ರತಿಯೊಬ್ಬರು ಇಂತಹ ಪರಿಸ್ಥಿತಿಗೆ ಒಳಗಾದಾಗ ಅವರು ಏನೆಲ್ಲಾ ಕಷ್ಟಪಟ್ಟರು ಅವರ ಸತ್ಯ ಅವರನ್ನು ಕಾಪಾಡುತ್ತದೆ ಎಂಬ ಜನಪದರ ನಂಬಿಕೆ ಹೆಚ್ಚು ಮುಖ್ಯವಾದದ್ದು.

ಗುಣಸಾಗರಿಯ ಸತ್ಯವೆ ಕೊನೆಗೆ ಅವಳನ್ನು ಕಾಪಾಡುತ್ತದೆ. ಗುಣಸಾಗರಿಯನ್ನು ನಿರುವಾಳ ಕಾಡಿಗೆ ಅಟ್ಟುವುದರಲ್ಲಿಯೇ ತೃಪ್ತಿಪಡಲಿಲ್ಲ. ಕಟುಕರನ್ನು ಕಳುಹಿಸಿ ಅವಳನ್ನು ಕೊಂದು ಬರಲು ನಿರುವಾಳ ಸಂಚು ಹೂಡುತ್ತಾನೆ. ಆದರೆ ಅವರೆ ಕತ್ತಿಗಳಿಗೆ ಬಲಿಪಶುಗಳಾಗುತ್ತಾರೆ. ಕೊನೆಗೆ ಗುಣಸಾಗರಿಯಿಂದಲೇ ಜೀವವನ್ನು ಪಡೆದು ಕೊಲೆಗಾರರು ಪಟ್ಟಣಕ್ಕೆ ಹಿಂದಿರುಗುತ್ತಾರೆ.

ಗುಣಸಾಗರಿಯನ್ನು ಕಾಡು ಪ್ರಾಣಿಗಳೆ ಆರೈಕೆ ಮಾಡುತ್ತವೆ. ಮುಂದೆ ಗುಣಸಾಗರಿ ಮುದ್ದಣ್ಣನ ಆಶ್ರಯ ಪಡೆದು ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಕೊನೆಗೆ ಮಗ ಸಿರಿದಾರ ಕತ್ತಿಯಿಂದ ಇರಿದು ಸಾಯಿಸುತ್ತಾನೆಂದು ಹಾಡುಗಾರ್ತಿ ವಚನ ರೂಪದಲ್ಲಿ ಹೇಳುವುದು ಹೆಚ್ಚು ಸೂಕ್ಷ್ಮವಾಗಿ ಕಂಡುಬಂದಿದೆ.

ರಾಮಾಯಣದ ಸೀತೆಯಂತೆಯೇ ಜನಪದರು ಗುಣಸಾಗರಿ ಕಥನ ಗೀತೆಯನ್ನು ಕಟ್ಟಿರುವುದು ಹೆಚ್ಚು ಮೌಲಿಕವಾಗಿ ಕಂಡುಬರುತ್ತದೆ. ಕ್ಷುಲಕ ವ್ಯಕ್ತಿಗಳು ಯಾವ ರೀತಿ ಇನ್ನೊಬ್ಬರ ಬದುಕನ್ನು ನಾಶಪಡಿಸುತ್ತಾರೆ. ಅಷ್ಟೆ ಅಲ್ಲ ಅವರು ಏನೆಲ್ಲಾ ಪ್ರಯತ್ನಿಸಿದರೂ ಒಳ್ಳೆಯವರ ಬದುಕನ್ನು ಅವರು ಆ ಕ್ಷಣಕ್ಕೆ ನಾಶಪಡಿಸಿದರು ಅವರೇ ಕೊನೆಗೆ ಗೆಲ್ಲುವಂತಹ ಮನೋಭಾವನೆ ಮನುಷ್ಯನನ್ನು ಒಳ್ಳೆಯತನದ ಕಡೆಗೆ ನಡೆಸುವಂತದ್ದಾಗಿದೆ.

ಗುಣಸಾಗರಿಯ ಮಗ ತನ್ನ ತಾಯಿಯರ ಕಷ್ಟಕ್ಕೆ ಕಾರಣರಾದವರನ್ನು ಕೊಲ್ಲುವುದು ದುಷ್ಟರ ಅಂತ್ಯವನ್ನು ಕಾಣಬಹುದಾಗಿದೆ. ಹೀಗೆ ಹೆಣ್ಣಿನ ನಡತೆ ಬಗೆಗೆ ಅನುಮಾನಿಸುವಾಗ ಅವಳು ಎಷ್ಟೆಲ್ಲಾ ನೋವನ್ನು ಅನುಭವಿಸುತ್ತಾಳೆ ಎಂಬುದನ್ನು ಅರ್ಥಪೂರ್ಣವಾಗಿ ಗುಣಸಾಗರಿ ಕಥನ ಗೀತೆಯಲ್ಲಿ ಕಟ್ಟಲ್ಪಟ್ಟಿದೆ.

ಟಿಪ್ಪಣಿಗಳು:

1. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಕಥನ ಗೀತೆಗಳು, ಮಲ್ಲಿಗೆರಾಯ ಕಥನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
2. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಕಥನ ಗೀತೆಗಳು, ಮಲ್ಲಿಗೆರಾಯ ಕಥನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
3. ಜಯಲಕ್ಷ್ಮಿ ಸೀತಾಪುರ, ನಮ್ಮ ಸುತ್ತಿನ ಜನಪದ ಕಥನ ಗೀತೆಗಳು, ಮಲ್ಲಿಗೆರಾಯ ಕಥನ ಕಾವ್ಯ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು
4. ಮೈಲಹಳ್ಳಿ ರೇವಣ್ಣ,ಚಿತ್ರ ದುರ್ಗ ಜಿಲ್ಲೆಯ ಜಿಲ್ಲೆಯ ಜನಪದ ಕಾವ್ಯಗಳು, ಗುಣಸಾಗರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
5. ಮೈಲಹಳ್ಳಿ ರೇವಣ್ಣ, ಚಿತ್ರ ದುರ್ಗ ಜಿಲ್ಲೆಯ ಜಿಲ್ಲೆಯ ಜನಪದ ಕಾವ್ಯಗಳು, ಗುಣಸಾಗರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
6. ಮೈಲಹಳ್ಳಿ ರೇವಣ್ಣ, ಚಿತ್ರ ದುರ್ಗ ಜಿಲ್ಲೆಯ ಜಿಲ್ಲೆಯ ಜನಪದ ಕಾವ್ಯಗಳು, ಗುಣಸಾಗರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
7. ಮೈಲಹಳ್ಳಿ ರೇವಣ್ಣ, ಚಿತ್ರ ದುರ್ಗ ಜಿಲ್ಲೆಯ ಜಿಲ್ಲೆಯ ಜನಪದ ಕಾವ್ಯಗಳು, ಗುಣಸಾಗರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು
8. ಮೈಲಹಳ್ಳಿ ರೇವಣ್ಣ, ಚಿತ್ರ ದುರ್ಗ ಜಿಲ್ಲೆಯ ಜಿಲ್ಲೆಯ ಜನಪದ ಕಾವ್ಯಗಳು, ಗುಣಸಾಗರಿ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

## ಕಾಳಿಂಗರಾಯ

ಸತ್ತಕಾಳಿಂಗರಾಯ ಕಥನ ಗೀತೆಯಲ್ಲಿ ಕಾಳಿಂಗರಾಯನ ಪತ್ರಕಂಡು ಬಂದರು, ಇಲ್ಲಿ ಮುಖ್ಯವಾದ ಪಾತ್ರ ಚೆನ್ನಮ್ಮನದು. ಶಿವನನ್ನು ಭಕ್ತಿಯಿಂದ ಪೂಜಿಸಿ ಪಡೆದ ಮಗ ಕಾಳಿಂಗರಾಯನಾಗಿರುತ್ತಾನೆ.ಈ ರೀತಿ ಪಡೆದ ಮಗುವನ್ನು ತುಂಬಾ ಕಾಳಜಿಯಿಂದ ನೋಡಿಕೊಳ್ಳುತ್ತಾರೆ. ಹೀಗೆ ಕಾಳಜಿಯಿಂದ ನೋಡಿಕೊಂಡಾಗ ತೊಂದರೆಗಳು ಒದಗುವುದು ಸಹಜ. ತುಂಬಾ ಇಷ್ಟದಿಂದ ಬೆಳೆಸಿದ ಮಗನು ಇಷ್ಟಾರ್ಥಗಳನ್ನು ಇಷ್ಟವಿಲ್ಲದಿದ್ದರು ಕೆಲವೊಂದು ಸಲ ಈಡೆರಿಸಬೇಕಾಗುತ್ತದೆ. ಆ ರೀತಿ ಕಾಳಿಂಗ ರಾಯನ ಇಷ್ಟವನ್ನು ನೆರವೇರಿಸಲು ಹೋಗಿ ತೊಂದರೆಗೆ ಸಿಲುಕಿಕೊಂಡ ಒಂದು ಪಾತ್ರವೇ ಕಾಳಿಂಗರಾಯ ಕಥನ ಕಾವ್ಯ.

ಕಾಳಿಂಗರಾಯನ ಕಥನ ಗೀತೆಯನ್ನು ಸಾಮಾಜಿಕ ಹಿನ್ನಲೆ, ಆರ್ಥಿಕ ಸ್ಥಿತಿಗತಿ ಹಾಗೂ ಕಾವ್ಯಗುಣಗಳ ಹಿನ್ನಲೆಯಲ್ಲಿ ನೋಡಬಹುದು. ಪುರುಷ ಮಕ್ಕಳಾಗದ ಸಂದರ್ಭದಲ್ಲಿ ಅನೇಕ ವಿವಾಹಗಳನ್ನು ಮಾಡಿಕೊಳ್ಳುವ ಪರಿಸ್ಥಿತಿ ಇಂದಿಗೂ ಅಲ್ಪ ಸ್ವಲ್ಪ ಬದಲಾಗಿದ್ದರೂ ಸಂಪೂರ್ಣವಾಗಿ ನಶಿಸಿಹೋಗಿರುವುದನ್ನು ಕಾಣುವುದು ಅಸಾಧ್ಯ. ಸತ್ತ ಕಾಳಿಂಗರಾಯನ ಕಥನ ಗೀತೆಯಲ್ಲಿ ಕಾಳಿಂಗರಾಯನ ತಂದೆ ಹತ್ತು ಜನ ಮಡದಿಯರನ್ನು ಹೊಂದಿರುವಂತಹವನು. ಆದರೆ ಯಾರಿಗು ಮಕ್ಕಳ ಸೌಭಾಗ್ಯವನ್ನು ಕರುಣಿಸಲಿಲ್ಲ. ಇಂಥಹ ಸ್ಥಿತಿಯಲ್ಲಿ ಮದರಂಭೆ ಮಾತ್ರ ಹನ್ನೆರಡು ವರ್ಷ ಶಿವನನ್ನು ಭಕ್ತಿಯಿಂದ ಪೂಜಿಸಿ ಕಾಳಿಂಗರಾಯನನ್ನು ಪಡೆಯುತ್ತಾಳೆ.

ಕಾಳಿಂಗರಾಯ ತಂದೆತಾಯಿಯರ ಮುದ್ದಿನ ಮಗನಾಗಿ ಬೆಳೆಯುತ್ತಾನೆ. ಆದರೆ ಮುದ್ದಿನ ಮಕ್ಕಳಿಗೆ ಹಠವಿರುವ ಹಾಗೆ ಕಾಳಿಂಗರಾಯನಿಗೂ ಹಠವಿರುತ್ತದೆ. ತಂದೆ ತಾಯಿಯು ಇವನು ಬೇಟೆಗೆ ಹೋಗುವುದು ಬೇಡವೆಂದು ತಿಳಿಸುತ್ತಾರೆ. ಆದರೆ ಕಾಳಿಂಗರಾಯನ ಹಠಮಾರಿತನಕ್ಕೆ ತಂದೆ ತಾಯಿಗಳಿಬ್ಬರೂ ಮಣಿಯುತ್ತಾರೆ. ಆದ್ದರಿಂದ ಅವನನ್ನು ಬೇಟೆಗೆ ಕಳುಹಿಸುತ್ತಾರೆ.

ಬೇಟೆಗೆ ಹೋದ ಕಾಳಿಂಗರಾಯ ಪ್ರಾರಂಭದಲ್ಲಿ ವಿಜಯವನ್ನು ಸಾಧಿಸಿದರೂ ಅವನ ಕೆಟ್ಟ ಹಠಮಾರಿತನದಿಂದ ಎಷ್ಟು ಹೇಳಿದರೂ ಕೇಳದೆ ಬೇಡವೆಂದ ಕೆಲಸವನ್ನು ಬೇಕಾಗಿ ಮಾಡಲು ಹೋಗಿ ಸಾವನ್ನಪ್ಪುತ್ತಾನೆ. ಈ ವಿಷಯ ಪ್ರಧಾನಿಯಿಂದ ತಂದೆತಾಯಿಗಳಿಗೆ ತಿಳಿಯುತ್ತದೆ. ತಂದೆ ತಾಯಿಗಳು ದುಃಖ ಪಡುತ್ತಾರೆ. ಇವರ ಮನಸ್ಸು ತಮ್ಮ ಮಗನಿಗೆ ಮದುವೆ ಮಾಡದೇ ತನ್ನ ಮಗನ ಶವವನ್ನು ಸಂಸ್ಕಾರ ಮಾಡುವುದು ಇಷ್ಟವಿರಲಿಲ್ಲ. ಆದ್ದರಿಂದ ಸತ್ತ ಕಾಳಿಂಗರಾಯನಿಗೆ ವಿವಾಹ ಮಾಡಲು

ಮುಂದಾಗುತ್ತಾರೆ. ಇವರ ಆರ್ಥಿಕ ಪರಿಸ್ಥಿತಿಯು ಇವರ ಇಚ್ಚೆಯನ್ನು ಪೂರೈಸಲು ಪೂರಕವಾಗುತ್ತದೆ.

ಶ್ರೀಮಂತರ ದಬ್ಬಾಳಿಕೆಗೆ ಬಡವರ ಕಷ್ಟಗಳು ಅರ್ಥವಾಗುವುದೇ ಇಲ್ಲ. ಇಲ್ಲಿ ಅವರ ಸುಖ ಸಂತೋಷವೇ ಮುಖ್ಯವಾದದ್ದು. ಆದ್ದರಿಂದ ಸತ್ತ ಕಾಳಿಂಗರಾಯನಿಗೆ ಹೆಣ್ಣು ಕೊಡಲು ಒಪ್ಪಿದವರಿಗೆ ಚಿನ್ನದ ಆಮಿಷಗಳನ್ನು ತೋರಿಸುವರು. ಇಲ್ಲಿ ವ್ಯಕ್ತಿಯ ಜೀವನಕ್ಕಿಂತ ಹಣದ ಆಮಿಷಗಳಿಗೆ ಹೆಚ್ಚು ಜೀವಂತಿಕೆ ಇರುವುದು. ಇದನ್ನು ಪ್ರಸ್ತುತ ಸ್ಥಿತಿಯಲ್ಲಿ ಕಾಣಬಹುದು.

ಸತ್ತ ಕಾಳಿಂಗರಾಯನಿಗೆ ಹೆಣ್ಣು ಕೊಡಲು ಒಪ್ಪದ ಊರಿನ ಜನರು ಆಡುತ್ತಿದ್ದ ಮಕ್ಕಳನ್ನು ಒಳಗೆ ಕರೆದುಕೊಂಡು ಬೀಗವನ್ನು ಹಾಕುತ್ತಾರೆ. ಆದರೆ ಹಾರುವಯ್ಯ ಮಾತ್ರ ತನ್ನ ಮಗಳು ಚೆನ್ನಮ್ಮನನ್ನು ಕೊಡಲು ಮುಂದಾಗುತ್ತಾನೆ. ಅವನು ಮಾತ್ರ ಏಕೆ ಚೆನ್ನಮ್ಮನನ್ನು ಕೊಡಲು ಸಿದ್ಧವಾಗುತ್ತಾನೆ ಎಂದರೆ ಅದಕ್ಕೆ ಅವನ ಬಡತನದ ಪರಿಸ್ಥಿತಿಯೇ ಕಾರಣವಾಗಿರುವಂತದ್ದು. ಇದನ್ನು ಕಾವ್ಯದಲ್ಲಿ ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಅಕ್ಕಿ ಉಂಡಸಾಲ, ಬೆಲ್ಲ ಉಂಡ ಸಾಲ
ಮತ್ತೆ ಅಂಗಡ್ಯಾಗೆ ಎಳಿದಾಟ। ನಮ್ಮಪ್ಪ
ಹಳೆಯ ಸಾಲಗಳ ಅರುಕಾಳೊ[1]

ಚೆನ್ನಮ್ಮ ವಿರೋಧಿಸುವುದಕ್ಕೂ ಸಾಧ್ಯವಿಲ್ಲ. ಅವರ ಮನೆಯ ಪರಿಸ್ಥಿತಿಯೆ ಅವಳನ್ನು ಮದುವೆಯಾಗುವಂತೆ ಪ್ರೇರೇಪಿಸುತ್ತದೆ. ಹೆಣ್ಣು ಮಕ್ಕಳು ತಮಗೆ ಇಷ್ಟವಿಲ್ಲದ ಸಂದರ್ಭದಲ್ಲಿ ಮನೆಯವರ ತೃಪ್ತಿಗೋಸ್ಕರ ಜೀವನವನ್ನು ಹೊಂದಿಸಿಕೊಳ್ಳುವುದನ್ನು ಕಾಣಬಹುದು.

ಆರ್ಥಿಕ ಪರಿಸ್ಥಿತಿಯಲ್ಲಿ ಸಿಲುಕಿಕೊಂಡಿರುವ ಮನುಷ್ಯನ ಪರಿಸ್ಥಿತಿಯನ್ನು ಚಿತ್ರಿಸಲಾಗಿದೆ. ಜೊತೆಗೆ ಶ್ರೀಮಂತಿಕೆ ಬಡತನವನ್ನು ಕೊಂಡುಕೊಳ್ಳುವ ಬಗೆಯನ್ನು ಚಿತ್ರಿಸಲಾಗಿದೆ. ಶ್ರೀಮಂತರ ಮನೆಗೆ ಸೊಸೆಯಾಗಿ ಹೋದ ಹೆಣ್ಣುಮಕ್ಕಳ ಪರಿಸ್ಥಿತಿಯನ್ನು ಚಿತ್ರಿಸಲಾಗಿದೆ.

ಚೆನ್ನಮ್ಮ ತನ್ನ ತಂದೆ ತಾಯಿಗೋಸ್ಕರ ಸತ್ತ ಕಾಳಿಂಗರಾಯನನ್ನೇ ಮದುವೆ ಯಾಗುತ್ತಾಳೆ. ಅವಳು ಸತ್ತ ಗಂಡನನ್ನೇ ನಂಬಿಕೊಂಡು ಅವನನ್ನು ಬಿಟ್ಟು ಅಲುಗಾಡುವುದಿಲ್ಲ. ಕಾಳಿಂಗರಾಯನ್ನು ಸುಡಲು ಬೆಂಕಿಗಾಗಿ ಹುಡುಕುತ್ತಾರೆ. ಆದರೆ ಶಿವ

ಮಾಯದ ಮಳೆ ತರಿಸಿ ಸುಡುವುದನ್ನು ತಪ್ಪಿಸುತ್ತಾನೆ. ಊರಿನ ಜನರೆಲ್ಲರೂ ತಮ್ಮ ಪಟ್ಟಣಕ್ಕೆ ಹಿಂದುರಿಗಿದರೂ ಚೆನ್ನಮ್ಮ ಮಾತ್ರ ಸತ್ತ ಗಂಡನ ಶವವನ್ನು ಬಿಟ್ಟು ಹಿಂದಿರುಗುವುದಿಲ್ಲ. ಕಾಡು ಪ್ರಾಣಿಗಳು ತಿನ್ನಲು ಬಂದರೂ ಆಕೆಯ ಸತ್ಯವನ್ನರಿತು ಹಿಂದಿರುಗಿ ಹೋಗುತ್ತವೆ.

ಹರಿಹರ ತನ್ನ ರಗಳೆಗಳಲ್ಲಿ ಶಿವಭಕ್ತಿಯನ್ನು ಕುರಿತು ರಚಿಸಿರುವಂತೆ ಜನಪದರು ಶಿವಭಕ್ತಿಯನ್ನು ಆ ರೀತಿ ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿರುತ್ತಾರೆ. ಶಿವ ತನ್ನ ಭಕ್ತನ ಭಕ್ತಿಯನ್ನು ತಿಳಿದುಕೊಳ್ಳಲು ಅನೇಕ ಕಷ್ಟಗಳನ್ನು ತನ್ನ ಭಕ್ತನಿಗೆ ನೀಡುತ್ತಾನೆ. ಆ ಕಷ್ಟಗಳನ್ನು ಎದುರಿಸಿದ ಭಕ್ತನಿಗೆ ಶಿವ ಪ್ರತ್ಯಕ್ಷನಾಗಿ ಭಕ್ತನ ಕಷ್ಟವನ್ನು ನೆರವೇರಿಸುತ್ತಾನೆ. ಅದೇ ರೀತಿ ಚೆನ್ನಮ್ಮನೂ ತನ್ನ ಕಷ್ಟಗಳನ್ನು ಪರಿಹರಿಸುವಂತೆ ಶಿವನಲ್ಲಿ ಬೇಡುತ್ತಾಳೆ. ಶಿವನು ಚೆನ್ನಮ್ಮನಿಗೆ ಅನೇಕ ಕಷ್ಟಗಳನ್ನು ನೀಡುತ್ತಾನೆ. ಕಾಡುಪ್ರಾಣಿಗಳು ತಿನ್ನಲು ಬಂದಾಗಲೂ ಚೆನ್ನಮ್ಮ ತನ್ನ ಗಂಡನನ್ನು ಬಿಟ್ಟು ಅಲುಗಾಡುವುದಿಲ್ಲ. ಕಾಳಿಂಗರಾಯನ ಮೈಯಿಂದಲೇ ಮಣ್ಣು ತೆಗೆದು ಬಸವನನ್ನು ಮಾಡಿ ಗಂಡನ ಪ್ರಾಣ ಪಡೆಯಲು ಶಿವನ ಬಳಿ ಕಳುಹಿಸುತ್ತಾಳೆ. ಮುತ್ತೈದೆತನವನ್ನು ಕರುಣಿಸುವಂತೆ ಬೇಡಿಕೊಳ್ಳುತ್ತಾಳೆ. ಶಿವ ಚೆನ್ನಮ್ಮನ ಪತಿಭಕ್ತಿಯನ್ನು ನೋಡಿ ಅವಳಿಗೆ ಮುತ್ತೈದೆತನವನ್ನು ಕರುಣಿಸುತ್ತಾನೆ.

ಸತ್ತ ಕಾಳಿಂಗರಾಯ ಸಂಜೀವಿನಿಯಿಂದ ಬದುಕುತ್ತಾನೆ. ದೇವಲೋಕದಲ್ಲಿ ದೇವತೆಗಳೇ ಚೆನ್ನಮ್ಮ ಮತ್ತು ಕಾಳಿಂಗರಾಯನಿಗೆ ಮುಂದೆ ನಿಂತು ಮದುವೆಯನ್ನು ಮಾಡಿಸುತ್ತಾರೆ. ಮದರಂಭೆ ಚೆನ್ನಮ್ಮನನ್ನು ನೋಡಿಕೊಂಡು ಬರಲು ಪ್ರಧಾನಿಯನ್ನು ಕಳುಹಿಸಿ, ಮನೆಗೆ ಕರೆದುಕೊಂಡು ಬರುವಂತೆ ತಿಳಿಸುತ್ತಾಳೆ. ಮನೆಗೆ ಬಂದ ಚೆನ್ನಮ್ಮನಿಂಧ ಬಡವರಿಗೆ ಮುತ್ತು ರತ್ನಗಳನ್ನು ದಾನ ಮಾಡಿಸುತ್ತಾಳೆ.

ಜನಪದ ಸಾಹಿತ್ಯದ ವೈಶಿಷ್ಟ್ಯವಿರುವುದೇ ಇಲ್ಲಿ. ಬಡವಳಾದ ಚೆನ್ನಮ್ಮ ತನ್ನ ತಂದೆ ತಾಯಿಗೋಸ್ಕರ ಸತ್ತ ಕಾಳಿಂಗರಾಯನನ್ನು ಮದುವೆಯಾಗಿ ಅವರ ಕಷ್ಟವನ್ನು ಇಲ್ಲವಾಗಿಸುತ್ತಾಳೆ. ನಂತರ ಅವಳ ಶಿವಭಕ್ತಿಯಿಂದ ತನ್ನ ಗಂಡನನ್ನು ಮತ್ತೆ ಪಡೆಯುತ್ತಾಳೆ. ಕಷ್ಟ ಸಹಿಷ್ಣುಳಾದ ಹೆಣ್ಣುಮಗಳ ಜೀವನವನ್ನು ಯಾವ ರೀತಿ ಸಾರ್ಥಕ ಪಡಿಸಿಕೊಳ್ಳುತ್ತಾಳೆ ಎಂಬುದನ್ನು ತಿಳಿಯಬಹುದಾಗಿದೆ.

ಕಾಳಿಂಗರಾಯನ ಕಥನ ಗೀತೆಯಲ್ಲಿ ಕಾವ್ಯದ ವಿಶಿಷ್ಟ ಗುಣಗಳನ್ನು ನೋಡಬಹುದು. ಅವರಲ್ಲಿಯೂ ಕವಿಯ ಗುಣವಿರುವುದೆ ಎಂಬುದಕ್ಕೆ ಕಾವ್ಯದ ಈ ಪದ್ಯಗಳೆ ಸಾಕ್ಷಿಯಾಗಿವೆ. ಜನಪದರು ವೃಧ್ಧಾಪ್ಯವನ್ನು ಸೂಚಿಸುವುದನ್ನು ಕಾವ್ಯಮಯವಾದ ಭಾಷೆಯಲ್ಲಿ ಹೇಗೆ ವ್ಯಕ್ತಪಡಿಸಿದ್ದಾರೆ ಎಂಬುದನ್ನು ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಕೊಳಗದ ಬಾಯಂಗೆ ಒಂದೊಂದು ಹಲಿಲ್ಲ
ಮುದಿಗೂಬೆ ಮಕ್ಕಳ್ನ ಭ್ರಮೀಸಿದೆ
ಮುದಿಗೂಬೆ ಮಕ್ಕಳ್ನ ಭ್ರಮಿಸಿದೆಂದೇ। ದೊರೆರಾಯ
ಮಾರೆ ಒಯ್ಯೋಯ್ದು ನಗುತ್ತಾನೆ[2]

ವೃಧ್ಧಾಪ್ಯವನ್ನು ಅತ್ಯಂತ ಅರ್ಥಪೂರ್ಣವಾದ ಕಾವ್ಯವನ್ನಾಗಿ ಮಾರ್ಪಡಿಸಿದ್ದಾರೆ. ಬಾಯಿಯಲ್ಲಿ ಹಲ್ಲುಗಳು ಉದುರಿಹೋಗಿವೆ. ಮುದುಕಿಯಾಗಿದ್ದಾಳೆ ಅಂತಹವಳು ಈಗ ಮಕ್ಕಳನ್ನು ಇಷ್ಟಪಡುತ್ತಿದ್ದಾಳೆ ಎಂಬುದನ್ನು ಸೂಚಿಸುವಂತಹದ್ದು.

ಬಡತನವನ್ನು ಸೂಚಿಸುವಲ್ಲಿ ಬಡತನನದ ಸ್ಥಿತಿಯನ್ನು ಚೆನ್ನಮ್ಮನ ಬಾಯಿಂದ ಹೀಗೆ ಮೂಡಿ ಬಂದಿದೆ.

ಅಕ್ಕಿ ಉಂಡಸಾಲ ಬೆಲ್ಲ ಉಂಡಸಾಲ
ಮತ್ತೆ ಅಂಗಡ್ಯಾಗೆ ಎಳಿದಾಟ। ನಮ್ಮಪ್ಪ
ಹಳೆಯ ಸಾಲಗಳ ಅರುಕಾಳೋ[3]

ಚೆನ್ನಮ್ಮನ ಅಪ್ಪ ಸಾಲಗಳಲ್ಲಿಯೆ ತನ್ನ ಸಂಸಾರವನ್ನು ನಡೆಸುತ್ತಿದ್ದಾನೆ. ಅಂಗಡಿಗಳಲ್ಲಿ ಅವನಿಗೆ ಸಾಲಕೊಡದ ಪರಿಸ್ಥಿತಿ ಒದಗಿರುವಂತಹದ್ದು. ಸದ್ಯದ ಪರಿಸ್ಥಿತಿಯನ್ನೆ ಬಗೆಹರಿಸಿಕೊಳ್ಳಲು ಸಾಧ್ಯವಾಗದ ಪರಿಸ್ಥಿತಿಯ ಜೊತೆಗೆ ಹಳೆಯ ಸಾಲಗಳು ಅವನನ್ನು ತೊಂದರೆಗೆ ಒಳಪಡಿಸಿರುವಂತಹದ್ದು. ಇಂತಹ ಪರಿಸ್ಥಿತಿಯಲ್ಲಿ ಸಲುಕಿದ ಮನುಷ್ಯ ಇಷ್ಟವಿಲ್ಲದಿದ್ದರೂ ಆ ಸಂದರ್ಭಕ್ಕನುಗುಣವಾಗಿ ತನ್ನ ಜೀವನವನ್ನು ಹೊಂದಾಣಿಕೆ ಮಾಡಿಕೊಳ್ಳುವಂತಹದ್ದು.

ಟಿಪ್ಪಣಿಗಳು:

1. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಕಾಳಿಂಗರಾಯ ಕಥನ ಕಾವ್ಯ, ಪುಟ ಸಂಖ್ಯೆ 15, ಮೈಸೂರು ವಿಶ್ವವಿದ್ಯಾಲಯ, ಮೈಸೂರು
2. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಕಾಳಿಂಗರಾಯ ಕಥನ ಕಾವ್ಯ, ಪುಟ ಸಂಖ್ಯೆ 20, ಮೈಸೂರು ವಿಶ್ವವಿದ್ಯಾಲಯ, ಮೈಸೂರು

## ತಾಯ್ತನ, ತವರು ಮತ್ತು ಬಂಜೆ ಕೇಂದ್ರಿತ ಜನಪದ ಗೀತೆಗಳು

ತಾಯ್ತನ ಹೆಣ್ಣಿಗೆ ಪ್ರಕೃತಿ ನೀಡಿರುವ ಕಾಣಿಕೆ. ಈ ಕಾಣಿಕೆಯಿಂದಲೇ ಹೆಣ್ಣು ಅಗ್ರಸ್ಥಾನದಲ್ಲಿರುವುದು. ಮಗುವನ್ನು ಗರ್ಭದಲ್ಲಿ ಹೊತ್ತಿಕೊಂಡಿರುವಾಗಲೇ ತಾಯ್ತನದ ಸ್ಪರ್ಶ ಅವಳಿಗಾಗುತ್ತದೆ. ಮಗುವನ್ನು ಜೋಪಾನವಾಗಿ ಕಾಪಾಡುವ ಕರ್ತವ್ಯ ಅವಳದಾಗಿರುತ್ತದೆ. ಹೆರಿಗೆ ಸಂದರ್ಭದಲ್ಲಿ ಅವಳು ಪಡುವ ನೋವು ಎಷ್ಟೆ ಕಷ್ಟವಾಗಿದ್ದರು ಮಗುವಿನ ಅಳು ಕೇಳುತ್ತಿದ್ದಂತೆಯೆ ಅವಳು ಅದನ್ನೆಲ್ಲಾ ಮರೆಯುತ್ತಾಳೆ. ಹೆಣ್ಣು ತನ್ನ ಪ್ರಾಣವನ್ನು ಲೆಕ್ಕಿಸದೆ ಮತ್ತೊಂದು ಜೀವಕ್ಕೆ ಜೀವದಾನ ಮಾಡುತ್ತಾಳೆ. ಈ ತಾಯ್ತನದ ಅನುಭವವೇ ವಿಶಿಷ್ಟವಾದದ್ದು.

ತಾಯಿಯ ಪ್ರೀತಿಗೆ ಮಿತಿಯೇ ಇರುವುದಿಲ್ಲ. ತನ್ನ ಮಗುವಿನ ಎಲ್ಲಾ ಬೆಳವಣಿಗೆಯಲ್ಲಿಯೂ ಅವಳು ಪ್ರಮುಖ ಪಾತ್ರವಹಿಸುತ್ತಾಳೆ. ಮನೆಯೇ ಮೊದಲ ಪಾಠಶಾಲೆ, ತಾಯಿಯೇ ಮೊದಲ ಗುರು. ಕಂದನ ಮುಗ್ಧತೆಯಲ್ಲಿ ಸಾಮಾನ್ಯವಾಗಿ ಹೆಚ್ಚು ಪಾಲು ಪಡೆಯುವುದು ತಾಯಿ. ಆಧುನಿಕ ಕಾಲದಲ್ಲಿರುವ ಪಾಥಮಿಕ ಶಿಕ್ಷಕಿಯರ ಸಂಖ್ಯೆಯೇ ಇದಕ್ಕೆ ಸಾಕ್ಷಿ.

ತಾಯಿಯನ್ನು ಭೂಮಿಗೆ ಹೋಲಿಸಲಾಗಿದೆ. ಭೂಮಿತಾಯಿಯಂತೆ ತಾಯಿಯು ಎಲ್ಲಾ ಕಷ್ಟಗಳನ್ನು ಅನುಭವಿಸಿದರು ಅವಳು ಒಳ್ಳೆಯದನ್ನೆ ಬಯಸುವವಳು. ಬಂಧು ಬಾಂದವ್ಯಗಳಲ್ಲಿ ತಾಯಿಗೆ ವಿಶಿಷ್ಟ ಸ್ಥಾನ ದೊರಕಿದೆ. ಆದ್ದರಿಂದಲೇ ಉಪ್ಪಿಗಿಂತ ರುಚಿ ಇಲ್ಲ, ತಾಯಿಗಿಂತ ಬಂಧುವಿಲ್ಲ ಎನ್ನುವ ನಾಣ್ಣುಡಿ ರೂಪುಗೊಂಡಿದೆ.

ಹೆಣ್ಣು ತಾನು ಹುಟ್ಟಿದ ಮನೆಯನ್ನು ತೊರೆದು ಗಂಡನ ಮನೆಯನ್ನು ಸೇರುವುದು ಲೋಕಾರೂಢಿಯಾಗಿದೆ. ಸ್ವಲ್ಪ ವರ್ಷಗಳ ಕಾಲ ಅವಳು ತವರು ಮನೆಯಲ್ಲಿದ್ದರು ಅವಳು ತನ್ನ ಜೀವನದ ತುಂಬಾ ವರ್ಷಗಳು ಕಳೆಯುವುದು ಗಂಡನ ಮನೆಯಲ್ಲಿ. ಆದರೆ ಅವಳು ಸ್ವಲ್ಪ ವರ್ಷಗಳು ಬೆಳೆದು ಆಸರೆಯನ್ನು ಒದಗಿಸಿದ ಆ ಮನೆಯನ್ನು ಅವಳು ಜೀವನ ಪರ್ಯಂತ ನೆನೆಸಿಕೊಳ್ಳುತ್ತಲೇ ಇರುತ್ತಾಳೆ.

ಬಾಲ್ಯದ ನೆನಪುಗಳನ್ನು ಮರೆಯುವುದಕ್ಕೆ ಸಾದ್ಯವೇ ಇಲ್ಲ. ಅಣ್ಣ, ತಂಗಿ, ಅಕ್ಕ, ತಮ್ಮಂದಿರ ನಡುವೆ ಬೆಳೆದಿರುವ ಅವಳ ಅನುಭವಗಳು ಒಂದುಕಡೆ ಅವಳನ್ನು ತವರು ನೆನಪಿಸುವಂತೆ ಮಾಡಿದರೆ ತಂದೆ ತಾಯಿಯರ ಪ್ರೀತಿ ವಾತ್ಸಲ್ಯ ಅವರನ್ನು ತವರು ಮನೆಯನ್ನು ನೆನಪಿಸುವಂತೆ ಮಾಡುತ್ತದೆ. ಗಂಡನ ಮನೆಯವರು ಎಷ್ಟೆ

ಶ್ರೀಮಂತರಾಗಿರಲಿ, ಬಡವರಾಗಿರಲಿ ಅವಳು ತನ್ನ ತಾಯಿಯ ಮನೆಯನ್ನು ನೆನಪಿಸಿಕೊಳ್ಳದೆ ಇರಲಾರರು.

ತಾಯಿಯ ಮನೆಯಲ್ಲಿ ಅವಳು ಸ್ವತಂತ್ರವಾದ ಹಕ್ಕಿಯ ಹಾಗೆ ಹಾರಾಡಿಕೊಂಡಿರುತ್ತಾಳೆ. ಆದರೆ ಗಂಡನ ಮನೆಯಲ್ಲಿ ಅವಳಿಗೆ ಎಷ್ಟೆ ಸ್ವಾತಂತ್ರ್ಯವಿದ್ದರೂ ಅವಳು ಮುಕ್ತ ಸ್ವಾತಂತ್ರ್ಯವನ್ನು ಅನುಭವಿಸಲಾರರು. ಕೆರೆಗೆಹಾರ, ಉತ್ತರದೇವಿ ಕಥೆಗಳಲ್ಲೂ ಹೆಣ್ಣು ಮಕ್ಕಳು ತವರಿನ ಮೇಲೆ ಇಟ್ಟರುವ ವಾತ್ಸಲ್ಯಗಳನ್ನೆ ವ್ಯಕ್ತಪಡಿಸುತ್ತವೆ. ಭಾಗಿರತಿ ತನ್ನನ್ನು ಹಾರವಾಗಿಸುವ ವಿಷಯ ತಿಳಿದ ಕೂಡಲೆ ತನ್ನ ತವರು ಮನೆಗೆ ಹೋಗಿಬರುವುದಾಗಿ ತಿಳಿಸುತ್ತಾಳೆ. ಹೊನ್ನಮ್ಮ ಕಥನ ಕಾವ್ಯದಲ್ಲೂ ಎಲ್ಲವೂ ಸಿದ್ಧಮಾಡಿಕೊಳ್ಳುವುದಾಗಿ ತಿಳಿಸಿ ತವರಿಗೆ ಹೋಗುತ್ತಾಳೆ. ತವರಿನ ಆಸರೆಗಿಂತಲೂ ಇವು ತವರಿನ ಮೇಲೆ ಹೊಂದಿರುವಂತ ಮಮತೆಯನ್ನು ಸ್ಪಷ್ಟಪಡಿಸುತ್ತವೆ.

ತಂದೆಯ ನೆನೆದರೆ ತಂಗಳು ಬಿಸಿಯಾಯ್ತು, ಗಂಗಾದೇವಿ ತನ್ನ ಹಡದವ್ವನ ನೆನೆದರೆ ಮಾಸಿದ ತಲೆಯು ಮಡಿಯಾಯ್ತು ಎಂಬ ಸಾಲುಗಳು ತಂದೆ ತಾಯಿಯರನ್ನು ನೆನೆದರೆ ಅವರ ಕಷ್ಟಗಳೆಲ್ಲಾ ಹೇಗೆ ಹಗುರವಾಗುತ್ತವೆ ಎಂಬುದನ್ನು ವ್ಯಕ್ತಪಡಿಸುತ್ತವೆ. ಅದೇ ರಿತಿ ಒಬ್ಬ ಹೆಣ್ಣು ಮಗಳು ತನಗೆ ಎಲ್ಲಿಯವರೆಗೆ ತವರು ಮನೆಯಿರಲಿ ಎಂದು ಆಸೆ ಪಡುತ್ತಾಳೆ ಎಂದರೆ

ಕಣ್ಣು ಕಾಣುವ ತನಕ ಬೆನ್ನು ಬಾಗುವ ತನಕ
ತಾಯಿರಲಿ ನನಗೆ ತವರಿರಲಿ। ನನ್ನವ್ವ
ಅಣ್ಣಯ್ಯರಿರಲಿ ಕರೆಸಾಕೆ

ಅವಳು ಮುದುಕಿಯಾದಗಲೂ ಅವಳಿಗೆ ತಾಯಿಮನೆ, ತವರುಮನೆ ಇರಲಿ. ತನ್ನ ತವರು ಮನೆ ಸದಾ ಹಸುರಿನ ಬಳ್ಳಿಯಂತೆ ಸಮೃದ್ಧಿಯಾಗಿರಲಿ ಎಂದು ಅವಳು ಹಾರೈಸುತ್ತಾಳೆ.

ಪ್ರಂಪಚದಲ್ಲಿ ಯಾವುದಕ್ಕೂ ಬೇಕಾದರೂ ಬಲೆ ಕಟ್ಟಬಹುದು. ಆದರೆ ತಾಯಿಯ ಪ್ರೀತಿಗೆ ಬೆಲೆ ಕಟ್ಟುವುದಕ್ಕೆ ಸಾಧ್ಯವೇ ಆಗಲಾರದು. ಭಾವನೆಯಲ್ಲಿ ತಾಯಿಗೆ ತವರು ಮನೆಗೆ ಕೊಡುವಂತಹ ಭಾವನೆಯೇ ಹೆಚ್ಚು ವ್ಯಾಪಕವಾದದ್ದು.

ಉತ್ತರ ದೇವಿ ಕಥನ ಕಾವ್ಯದಲ್ಲಿ ಹೆಂಡತಿಯ ಪ್ರೀತಿ ತಾಯಿ ಪ್ರೀತಿ ಗೆಲ್ಲುವ ಸಂದರ್ಭವನ್ನು ನೋಡಬಹುದು. ಹೆಂಡತಿಯ ಬಗ್ಗೆ ಪ್ರೀತಿಯಿದ್ದರು ತಾಯಿಯ ಪ್ರೀತಿ ಅವನನ್ನು ಕಳಚಿಕೊಳ್ಳುವುದಕ್ಕೆ ಅಷ್ಟು ಸುಲಭವಾದುದಲ್ಲ ಎಂಬುದನ್ನು ವ್ಯಕ್ತಪಡಿಸುತ್ತವೆ.

## ಬಾಣಂತಿ ಹಾಡು

ಹೆರಿಗೆ ನೋವನ್ನನುಭವಿಸಿ ಪಡೆದ ಕಂದಮ್ಮನಿಗೆ ಇನ್ನೂ ಎದೆಹಾಲು ಕೊಡುವಾಗಲೆ, ಯಮನ ರೌದ್ರ ದರ್ಶನವಾಗುತ್ತದೆ. ಮಗುವಿನ ಸುಖಾನುಭವ ಸ್ಪರ್ಶದಲ್ಲಿ ಮುಳುಗಿರುವ ಇಂತಹ ಸಂದರ್ಭದಲ್ಲಿ ಅವಳಿಗೆ ಸಾವಿನ ಸುದ್ದಿ ತಿಳಿದಾಗ ಯಮನಿಗೆ ಚಿನ್ನದ ಗಿಂಡಿಯಲ್ಲಿ ಪನ್ನೀರನ್ನು ತಂದು ಕೈಕಾಲು ತೊಳೆದುಕೊಂಡು ಕುಡಿಯಿರೆಂದು ಕೊಡುತ್ತಾಳೆ. ಯಮ ನಾನು ಕೂರಾಕೆ ಬಂದಿಲ್ಲ ನಿಲ್ಲಾಕೆ ಬಂದಿಲ್ಲವೆಂದು ತಿಳಿಯಪಡಿಸುತ್ತಾನೆ. ತನ್ನ ಮಗುವನ್ನು ಬಿಟ್ಟು ಹೋಗುವುದಕ್ಕೆ ಇಷ್ಟಪಡದ ಸಂದರ್ಭದಲ್ಲಿ ಅವಳು ಇಷ್ಟಪಡದ ಸಮಯದಲ್ಲಿ ಯಮನನ್ನು ಕೇಳಿಕೊಳ್ಳುವ ಬಗೆ ಇದಾಗಿದೆ.

ಸಾವಿಗೆ ಶರಣಾಗಲೂ ಕಷ್ಟವಾಗುತ್ತಿಲ್ಲ. ಆದರೆ ಈ ಪುಟ್ಟ ಕಂದಮ್ಮನನ್ನು ಬಿಟ್ಟು ಹೋಗುವುದು ಅವಳಿಗೆ ಸಾಧ್ಯವಾಗುತ್ತಿಲ್ಲ. ಅಂತಹ ಸಂದರ್ಭದಲ್ಲಿ ಅವಳು ಹೊಳಹೊಕ್ಕು ಮಗುವನ್ನು ಬಿಟ್ಟು ಹೋಗಲು ಒಪ್ಪದ ಮನಸ್ಸು. ಆದರೆ ಯಮ ಬೆನ್ನ ಹಿಂದೆಯೇ ಇದ್ದಾನೆ. ಅದರಿಂದಲೂ ತಪ್ಪಿಸಿಕೊಳ್ಳಲು ಆಗದ ಸಂದರ್ಭದಲ್ಲಿ ಅವಳು ಮಗುವನ್ನು ನೋಡಿ ನೋಡಿ ದುಃಖಿಸುವ ಸ್ಥಿತಿಯನ್ನು ಕಾವ್ಯದಲ್ಲಿ ಯಾವ ರೀತಿ ಮೂಡಿದೆ ಎಂಬುದನ್ನು ಕಾವ್ಯದ ಈ ಸಾಲುಗಳು ವ್ಯಕ್ತಪಡಿಸುತ್ತವೆ.

ಅಲ್ಲಿಂದ ಬಾಣತಿ ಒಳವೀಕೆ ಹೋದಾಳು
ಕಂದನಿನ್ನ ಕರಕಂಡು ಶಿವನೆ
ಕಂದನ್ನ ಕರಕರಕಂದು ಎದೆಹಾಲ ಕೊಟ್ಟಾಳು
ಗೋಳಾಡಿ ದುಕ್ಕ ಮಾಡುತ್ತಾಳೆ ಬಾಣಂತಿ
ಏನೆಂದು ನಿನ್ನ ಕೇಳುತ್ತಾಳೆ ಶಿವನೆ
ಕಂದನ ಮೈಯ ಸವರೀಳು ಬಾಣತಿ
ಗೋಳಾಡಿ ದುಕ್ಕ ಮಾಡುತ್ತಾಳೆ
ಎಣ್ಣೆಯ ಕಾಸ್ಯಾಳು ಎಣ್ಣೆಯ ಹಚ್ಯಾಳು
ಒಂದೊಳಲೆ ಹಾಲ ಉಯ್ದಾಳು ಶಿವನೆ
ಒಂದೊಳಲೆ ಹಾಲ ಉಯ್ದಾಳು ಬಾಣತಿ
ಗೋಳಾಡಿ ದುಕ್ಕ ಮಾಡುತ್ತಾಳೆ ಶಿವನೆ'



ಕಂದನನ್ನು ಬಿಟ್ಟು ಹೋಗಲು ಅವಳು ಇಷ್ಟಪಡುತ್ತಿಲ್ಲ. ಕಂದನ ಪ್ರೀತಿ ವಾತ್ಸಲ್ಯ ಅವಳನ್ನು ಸಾವಿನ ಅಂಚಿಗೆ ದೂಡಲು ತಡೆಹಿಡಿಯುತ್ತವೆ. ಸಾವಿನ ಪರಿಸ್ಥಿತಿಯಲ್ಲಿ ಅವಳ ಮಗು ಅವಳನ್ನು ಸಾವಿನ ದಾರಿಗೆ ಹೋಗಲು ಬಿಡದ

ಸಂದರ್ಭಗಳನ್ನು ತಿಳಿಸುವಂತಹದ್ದು. ಕೊನೆಗೆ ಅವಳು ಸಾವನ್ನಪ್ಪುವ ಮುನ್ನ ತನ್ನ ತವರು ಮನೆಯನ್ನು ನೆನೆಪಿಸಿಕೊಂಡು ತವರಿಗೆ ಹೋಗಿ ಬರುತ್ತಾಳೆ. ಸುಖ-ದುಖಗಳೆರಡರ ಸಂದರ್ಭದಲ್ಲಿಯೂ ಅವಳು ತವರನ್ನು ನೆನಪಿಸಿಕೊಳ್ಳುತ್ತಾಳೆ. ನಾಗರ ಪಂಚಮಿ ಪದದಲ್ಲಿ ಅವಳನ್ನು ಗಂಡನ ಮನೆಯಲ್ಲಿ ಎಲ್ಲರು ಸುಖವಾಗಿ ನೋಡಿಕೊಂಡರೂ ಅವಳು ತನ್ನ ತವರು ಮನೆಯವರು ಹಬ್ಬಕ್ಕೆ ಕರೆಯಲು ಬರಲಿಲ್ಲವಲ್ಲ ಎಂದು ಕಾತುರದಿಂದ ಕಾಯುತ್ತಿದ್ದಾಳೆ. ಕಷ್ಟಬಂದಾಗ ಮಾತ್ರ ಅವಳು ತವರನ್ನು ನೆನಪಿಸಿಕೊಳ್ಳುತ್ತಿಲ್ಲ. ಸುಖದುಃಖಗಳೆರಡರಲ್ಲೂ ತವರನ್ನು ನೆನೆಪಿಸಿಕೊಳ್ಳುವುದನ್ನು ಕಾಣಬಹುದು.

ತವರಿಗೆ ಹೋಗಿ ಬಂದು ಮಗುವನ್ನು ಬಿಟ್ಟು ಹೋಗಲು ಹೋಗದೆ ಅವಳು ಹತ್ತು ಸಲ ಅಟ್ಟಾಕೆ ಹಾಕಿರುವ ಕಾಲೇಣಿಯನ್ನು ಹತ್ತಿ ಇಳಿಯುವ ಸಂದರ್ಭದಲ್ಲಿ ಅವಳು ಮರಣವನ್ನು ಹೊಂದುತ್ತಾಳೆ. ಆದರೆ ಜನಪದರು ಮುಕ್ತಾಯವನ್ನು ದುಃಖದಲ್ಲಿ ಮುಗಿಸಲಿಲ್ಲ ಏಕೆಂದರೆ ಅವರು ಸಣ್ಣ ಮಗು ಅನಾಥವಾಗಿ ಬೆಳೆಯುವುದಕ್ಕೆ ಇಷ್ಟಪಡದ ಪರಿಸ್ಥಿತಿ ಅವರು ಸುಖಂತವಾಗಿ ಕಾವ್ಯವನ್ನು ಮುಕ್ತಾಯ ಗೊಳಿಸಿದ್ದಾರೆ. ಶಿವ ಪಾರ್ವತಿಯರೆ ಮತ್ತೆ ಅವಳಿಗೆ ಜೀವದಾನ ಮಾಡಿ ಅವಳು ಬದುಕಿಉಳಿಯುತ್ತಾಳೆ.

ತಾಯಿತನವನ್ನು ಚಿತ್ರಿಸುತ್ತಿರುವ ಈ ಕಥನ ಕಾವ್ಯ ಸಣ್ಣ ಮಗುವನ್ನು ಬಿಟ್ಟು ಹೋಗಬೇಕಾದಾಗ ಅವಳ ತಳಮಳಗಳಗಳನ್ನು ಅತ್ಯಂತ ಸೂಕ್ಷ್ಮವಾಗಿ ಕಟ್ಟಿಕೊಟ್ಟಿರುವುದನ್ನು ನೋಡಬಹುದು.

ಟಿಪ್ಪಣಿಗಳು:

1. ತಲ್ವಾಡಿ ಬಿ.ಎಸ್ 'ಹೆಂಗಸರ ಹಾಡ್ಗತೆಗಳು', ಬಾಣಂತಿ ಹಾಡು, ಭಾವನಾ ಪ್ರಕಾಶನ,

## ಬಂಜೆ ಕೇಂದ್ರಿತ ಜನಪದ ಕಥನ ಕಾವ್ಯ

ಮಕ್ಕಳ ಭಾಗ್ಯವಿಲ್ಲದ ಹೆಣ್ಣನ್ನು ಬಂಜೆ ಎಂದು ಕರೆಯುತ್ತಾರೆ. ಸಮಾಜದಲ್ಲಿ ಇಂತಹ ಹೆಣ್ಣು ಅನೇಕ ತಾತ್ಸರ ಭಾವನೆಗಳಿಗೆ ಒಳಗಾಗುತ್ತಾಳೆ. ಅಂತಹ ತಾತ್ಸರ ಭಾವನೆಗಳಿಗೆ ಒಳಗಾದಾಗ ಅವಳು ಪಡುವ ಯಾತನೆಯನ್ನು ಕಥನ ಗೀತೆಗಳಲ್ಲಿ ವ್ಯಕ್ತಪಡಿಸಿದ್ದಾರೆ.

ಜನಪದರಲ್ಲಿ ಸ್ವಂತ ಬದುಕಿಗಿಂತ ಹೆಚು ಪ್ರಾಶಸ್ತ್ಯವಿರುವುದು ಸಮಾಜಿಕ ಬದುಕಿಗೆ. ಇದನ್ನು ನಾವು ಕಥನ ಗೀತೆಗಳಲ್ಲಿ ಈಗಾಗಲೆ ನೋಡಿದ್ದಿವಿ. ಹೆಣ್ಣಿಗೆ ತಾಯ್ತನ ಅಮೂಲ್ಯವಾದದ್ದು. ಈ ಅಮೂಲ್ಯವಾದ ತಾಯ್ತನ ದೊರೆಯದೆ ಹೋದಾಗ ಆ ಹೆಣ್ಣು ಮಾನಸಿಕವಾಗಿ ನೊಂದಿರುತ್ತಾಳೆ. ಅಂತಹ ಸಮಯದಲ್ಲಿ ಸುತ್ತಮುತ್ತಲಿನವರು ಮಾನಸಿಕ ಧೈರ್ಯವನ್ನು ತುಂಬಬೇಕು. ಆದರೆ ಅವರು ಅವಳನ್ನು ಇನ್ನಷ್ಟು ಕಷ್ಟಕ್ಕೆ, ದುಃಖಕ್ಕೆ ನೂಕುವುದನ್ನು ಅಂತಹ ಪರಿಸ್ಥಿತಿಯಲ್ಲಿ ನೊಂದ ಹೆಣ್ಣುಮಗಳೆ ತಾನು ಪಟ್ಟ ಕಷ್ಟಗಳನ್ನೆ ಕಥನ ಕಾವ್ಯವನ್ನಾಗಿಸಿರುವುದನ್ನು ಕಾಣಬಹುದು.

ಪುರುಷರು ಮಕ್ಕಳಾಗದೆ ಹೋದರೆ ಮತ್ತೊಂದು ಮದುವೆಯನ್ನು ಮಾಡಿಕೊಂಡು ಮಕ್ಕಳನ್ನು ಪಡೆಯುತ್ತಾರೆ. ಆದರೆ ಹೆಣ್ಣು ಅಷ್ಟು ಸುಲಭವಾಗಿ ಈ ನಿಂದನೆಯಿಂದ ದೂರವಾಗಲು ಸಾಧ್ಯವಿಲ್ಲ. ಆಧುನಿಕ ಕಾಲದಲ್ಲಿ ಇದರ ರೂಪ ಬದಲಾಗಿದೆ. ವಿಜ್ಞಾನದಲ್ಲಿ ಇದಕ್ಕೆ ಅನೇಕ ತಂತ್ರಜ್ಞಾನಗಳು ಮುಂದುವರೆದಿದೆ. ಆದರೆ ಈ ತಂತ್ರಜ್ಞಾನಕ್ಕೆ ಒಳಗಾಗಲೂ ಹಣದ ಕೊರತೆ ಇರುವವರು ಈಗಲು ಒಂದಲ್ಲ ಒಂದು ಸಲ ನಿಂದನೆಗೆ ಒಳಗಾಗುತ್ತಲೆ ಇರುತ್ತಾರೆ. ಮಕ್ಕಳು ಆಗಲಿಲ್ಲವೆಂದು ಅವರೆ ದುಃಖಪಡುವ ಸಂದರ್ಭದಲ್ಲಿ ಸುತ್ತಮುತ್ತಲಿನವರು ಅವರನ್ನು ಇನ್ನಷ್ಟು ದುಃಖಕ್ಕೆ ಒಳಪಡಿಸುವ ಸಂದರ್ಭವನ್ನು ಕಥನ ಕಾವ್ಯವನ್ನಾಗಿಸಿದ್ದಾರೆ.

ಬಂಜೆ ಎನ್ನುವ ಪದವೇ ಕಠಿಣವಾದದ್ದು. ಇಂತಹ ಸ್ಥಿತಿಗೆ ಒಳಗಾದಾಗ ಅವಳು ಪಡುವ ನೋವು ಇನ್ನಷ್ಟು ಕಠಿಣವಾದದ್ದು. ಅವಲು ಎಷ್ಟೆ ಆರ್ಥಿಕವಾಗಿ, ದೈಹಿಕವಾಗಿ ಬಲಿಷ್ಠರಾಗಿದ್ದರೂ ವ್ಯರ್ಥ ಎಂಬುದಾಗಿ ಪರಿಗಣಿಸುವ ಮನೋಧರ್ಮ.

## ಬಂಜೆ ಎನ್ನೊ ಸೊಲ್ಲ ಮರಸಯ್ಯ

ಬಂಜೆಯಾದವರ ಹತ್ತಿರ ಅಪಾರವಾದ ಸಂಪತ್ತಿದ್ದರೂ ಅದೂ ಅಪ್ರಯೋಜನಕವಾದದ್ದು. ಅದನ್ನು ಅನುಭವಿಸುವ ಮಕ್ಕಳು ಇಲ್ಲದ ಮೇಲೆ ಅವರ ಹತ್ತಿರ ಅಪಾರವದ ಹಣ ಆಸ್ತಿ ಇದ್ದರೂ ಅದು ವ್ಯರ್ಥವೆಂದೆ ಭಾವಿಸಲಾಗುತ್ತಾದೆ. ಇದನ್ನು ಜನಪದ ಗೀತೆಯಲ್ಲಿ ಈ ರೀತಿ ವ್ಯಕ್ತಪಡಿಸುತ್ತಾರೆ.

ಬಂಜೆ ಮನೆಮುಂದೆ ಬಂಗಾರದ್ಹೊಳಕಲ್ಲು
ಒಳಕಲ್ಲಿದ್ದಾರೆ ಎದ್ದು ಕುಟ್ಟೋರಿಲ್ಲ
ಬಂಜೆ ಮನೆಮುಂದೆ ಬಂಗಾರದ ರಾಗಿಕಲ್ಲು
ಎದ್ದು ಬೀಸೋ ಮಗಳೇ ಮನೆಯಾಗಿಲ್ಲ
ಬಂಜೆ ಮನೆ ಮುಂದೆ ಬಂಗಾರದ ಸೆದೋ ಬಾವಿ
ಎದ್ದು ಸೇದೋ ಮಗಳೇ ಮನೆಯಾಗಿಲ್ಲ.[1]

ಮಕ್ಕಳಿಲ್ಲದ ಹೆಣ್ಣುಮಗಳನ್ನು ನಿಕೃಷ್ಟವಾಗಿ ನೋಡುವಂತದ್ದು. ಅವಳು ಬೆಂಕಿ ತರಲು ಹೋದರೆ ಅವಳಿಗೆ ಕೊಡದೇ ಇರುವುದು. ಅವಳು ಬರುವ ವೇಳೆಗೆ ಬಾಗಿಲು ಮುಚ್ಚುವುದು. ಅಂತಹವರ ಕೈಗೆ ಮಕ್ಕಳನ್ನು ಕೊಡದಿರುವುದು. ಜಗಳದ ಸಮಯದಲ್ಲಂತೂ ಬೈಗುಳಗಳ ನಿಂದನೆ ತಾಳಲು ಅಸಾಧ್ಯವಾದದ್ದು.

ತನ್ನ ಒಡಹುಟ್ಟಿದವರ ಮಕ್ಕಳನ್ನೆ ತನ್ನವರೆಂದು ಭಾವಿಸಿ ಕೊಂಡಾಗಲೂ ಆ ಮಕ್ಕಳನ್ನು ಅವಳ ಹತ್ತಿರ ಬಿಡದೆ ಇರುವಾಗ ಅವಳು ಪಡುವ ಯಾತನೇ, ಆಸ್ತಿಯ ವಿಚಾರದಲ್ಲಾಗಿರಬಹುದು ಅಥವಾ ಒಂದು ಬೆಲೆ ಬಾಳುವ ವಸ್ತುವನ್ನು ಖರೀದಿಸುವಾಗಲೂ ಬೇರೆಯವರು ಹೇಳುವ ಮಾತುಗಳಿಗೆ ಬೆಲೆಕೊಡಬಾರದು ಎಂದು ಯೋಚಿಸಿದರೂ ಮತ್ತೊಂದು ಕ್ಷಣ ಅವಳನ್ನು ಆ ಯೋಚನೆಗೆ ಗುರಿಮಾಡುವಂತಹದ್ದು. ಅವಳ ಹಕ್ಕು ಅವಳಿಗಿರುತ್ತದೆ. ಆದರೆ ಇದನ್ನು ಯೋಚಿಸದೇ ಅವಳ ಭಾವನೆಗಳನ್ನು ತಿರಸ್ಕಾರ ಭಾವದಿಂದ ನೋಡುವ ಪರಿಸ್ಥಿತಿಗೆ ಸಿಲುಕಿಕೊಂಡಾಗ ಅವಳು ನಾನಾ ವಿಧದಲ್ಲಿ ತನಗೆ ಮಕ್ಕಳ ಭಾಗ್ಯವನ್ನು ಕರುಣಿಸುವಂತೆ ಪ್ರಾರ್ಥಿಸುತ್ತಾಳೆ.

ಬಂಜೆ ಎನ್ನುವ ಪದವನ್ನು ಬಿಡಿಸು ಶಿವನೆ, ನನಗೆ ಮಕ್ಕಳ ಭಾಗ್ಯವಾ ಕೊಡು ತಂದೆ ಎಂದು ನಾನಾ ವಿಧದಲ್ಲಿ ಪ್ರಾರ್ಥಿಸಿಕೊಳ್ಳುತ್ತಾಳೆ. ಬಂಜೆ ಎನ್ನುವ ಸೊಲ್ಲನ್ನು ಮರುಸಯ್ಯಾ, ಆಗಲೇ ಹುಟ್ಟಿ ಆಗಲೇ ಸತ್ತರೂ ಪರವಾಗಿಲ್ಲ, ನನಗೆ ಮಕ್ಕಳ ಭಾಗ್ಯವ

ಕೊಡುತಂದೆ ಎಂದು ಕೇಳುವಲ್ಲಿ ಅವಳು ಪಡುತ್ತಿರುವ ಯಾತನೆಯನ್ನು ತಿಳಿಯಬಹುದಾಗಿದೆ.

ಬಂಜೆ ಹೊನ್ನಮ್ಮ ಕಥನ ಗೀತೆಯಲ್ಲಿ ಹೊನ್ನಮ್ಮ ಮಕ್ಕಳ ಫಲ ಲಭಿಸದಿದ್ದಾಗ ತನ್ನ ಅಕ್ಕತಂಗಿಯರಿಂದಲೆ ತಿರಸ್ಕರಸಲ್ಪಡುತ್ತಾಳೆ. ಹೊನ್ನಮ್ಮ ಶಿವನನ್ನು ಪ್ರಾರ್ಥಿಸಿಕೊಳ್ಳುತ್ತಾಳೆ. ಶಿವ ಪ್ರತ್ಯಕ್ಷವಾಗಿ ಮಕ್ಕಳ ಭಾಗ್ಯವ ಕೊಟ್ಟರೆ, ತನಗೇನು ಕೊಡುತ್ತೀಯಾ? ಎಂದು ಕೇಳುತ್ತಾಳೆ. ಹೊನ್ನಮ್ಮ ವಜ್ರ, ವೈಢೂರ್ಯವನ್ನು ಕೊಡುವುದಾಗಿ ತಿಳಿಸುತ್ತಾಳೆ. ಶಿವ ತನಗೆ ಹುಟ್ಟಿದ ಬಾಲಕನನ್ನೆ ಹಾರವಾಗಿ ಕೊಡಬೇಕೆಂದು ತಿಳಿಸುತ್ತಾನೆ. ಹೊನ್ನಮ್ಮ ಆಗಲಿ ಕೊಟ್ಟು ಹೋಗು ಎಂದು ತಿಳಿಸುವಲ್ಲಿ ಅವಳು ಜೀವನದಲ್ಲಿ ಯಾವ ರೀತಿ ದುಃಖಕ್ಕೆ ಒಳಗಾಗಿದ್ದಾಳೆ ಎಂದು ತಿಳಿಯಬಹುದು.

ಅವಳು ಕೊಟ್ಟ ಮಾತಿನಂತೆ ಪಡೆದ ಮಗುವನ್ನು ಶಿವನಿಗೆ ಅರ್ಪಿಸುತ್ತಾಳೆ. ಅರ್ಪಿಸುವಾಗ ಮಗುವಿನ ತಲೆಯನ್ನು ಹಾಗೇ ಇಟ್ಟುಕೊಳ್ಳುತ್ತಾಳೆ. ಮುಂಡವನ್ನು ತೆಗೆದು ಅಡುಗೆ ಮಾಡಿ ಬಡಿಸುತ್ತಾಳೆ. ಶಿವ ಕೊಟ್ಟ ಮಾತಿಗೆ ತಪ್ಪಿರುವುದಾಗಿ ತಿಳಿಸುತ್ತಾನೆ. ಇಲ್ಲಿ ಅವಳಿಗೆ ಮಗುವಿನ ಮೇಲೆ ಪ್ರೀತಿ ಬಾಂಧವ್ಯವಿರುವ ವಿಷಯ ತಿಳಿದುಬರುತ್ತದೆ. ಆದರೆ ಕೊಟ್ಟ ಮಾತಿಗೆ ತಪ್ಪಿದಂತೆ ಶಿವ ಹೇಳಿದಾಗ ಅವಳು ತಲೆಯನ್ನು ಶಿವನಿಗೆ ಅರ್ಪಿಸುತ್ತಾಳೆ.

ಬಂಜೆ ಎನ್ನುವ ಕಳಂಕವನ್ನು ಕಳೆದುಕೊಳ್ಳುವುದಕ್ಕೆ ಅವಳು ಹೆತ್ತ ಮಗುವನ್ನೆ ಕೊಡುವುದಕ್ಕೆ ಸಿದ್ಧವಾಗುತ್ತಾಳೆ. ಮತ್ತೆ ಇಲ್ಲಿ ಅವಳು ಆ ಮಗುವನ್ನು ಕೊಡುವಾಗಲು ಅವಳು ಎಷ್ಟು ದುಃಖಪಡುತ್ತಾಳೆ. ಒಬ್ಬ ತಾಯಿಗೆ ಹತ್ತು ಜನ ಮಕ್ಕಳಿದ್ದರೂ ಒಂದು ಮಗುವನ್ನು ಕೊಡುವುದಕ್ಕೂ ಇಷ್ಟಪಡುವುದಿಲ್ಲ. ಆದರೆ ಇವಳು ಹಾರವಾಗಿ ತನ್ನ ಮಗುವನ್ನು ಅರ್ಪಿಸುತ್ತಾಳೆ ಎಂದರೆ ಇವಳನ್ನು ಸಮಾಜ ಎಂತಹ ಕ್ರೂರ ದೃಷ್ಟಿಯಿಂದ ನೋಡಿದೆ ಎಂಬುದನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ಇಂತಹ ಕ್ರೂರ ದೃಷ್ಟಿಗೆ ಒಳಗಾದಾಗ ಅವಳು ಪಡುವ ವೇದನೆಯೇ ಜನಪದ ಕಥನ ಗೀತೆಯಾಗಿ ಮೂಡಿ ಬಂದಿದೆ.

ಟಿಪ್ಪಣಿಗಳು:

1. ಸುವರ್ಣ ಜನಪದ ಕಾವ್ಯ, ಬಂಜೆ ಎನ್ನೊ ಸೊಲ್ಲ ಮರಸಯ್ಯ

## ಈ) ಅಣ್ಣ ತಂಗಿಯ ಸಂಬಂಧ

ಕುಟುಂಬ ಎನ್ನುವುದು ಒಂದು ಭಾವನತ್ಮಾಕ ಸಂಬಂಧಕ್ಕೆ ಹೆಚ್ಚು ಆಧ್ಯತೆ ನೀಡಿರುವಂತಹದ್ದು. ಅಣ್ಣ ತಂಗಿ, ಅಕ್ಕ ತಮ್ಮ, ಅಪ್ಪ ಅಮ್ಮ ಭಾವ ಅತ್ತೆ ಮಾವ, ಚಿಕ್ಕಮ್ಮ ಚಿಕ್ಕಪ್ಪ ಹೀಗೆ ಅಲ್ಲಿ ನಾನ ಸಂಬಂಧಗಳ ನಡುವೆ ನಿಂತಿರುವಂತಹದ್ದು. ಇಂದಿನ ಜಾಗತಿಕರಣದ ಯುಗದಲ್ಲಿ ಈ ಸಂಬಂಧಗಳು ನಶಿಸುತ್ತಿರುವುದನ್ನು ಕಾಣಬಹುದು. ಚಿಕ್ಕಪ್ಪ ಅಂದರೆ ಯಾರು? ಚಿಕ್ಕಮ್ಮ ಅಂದರೆ ಯಾರು? ಎನ್ನುವ ಸಂಬಂಧಗಳನ್ನೆ ಗುರುತಿಸಲಾಗದಂತ ಸ್ಥಿತಿಗೆ ಒಳಪಟ್ಟಿರುವ ಸನ್ನಿವೇಶಗಳಲ್ಲಿ ಈ ಅಣ್ಣ ತಂಗಿ ಅಕ್ಕ ತಂಗಿಯರಿಗೆ ಬೆಲೆಯೆ ಇಲ್ಲದಿರಬಹುದು. ಆದರೆ ಈ ಸಂಬಂಧದಗಳನ್ನು ಉಳಿಸಿಕೊಂಡವರಿಗೆ ಅವರದೆ ಆದ ಭಾವನೆಗಳು ಇರುತ್ತವೆ. ಅಂತಹ ಭಾವನೆಯಲ್ಲಿ ಬೆಳೆದ ಅಣ್ಣ ತಂಗಿಯ ಸಂಬಂಧವನ್ನು ನಾಗರ ಪಂಚಮಿ ಪದದಲ್ಲಿ ಹೇಗೆ ಈ ಅಣ್ಣ ತಂಗಿಯ ಸಂಬಂಧವನ್ನು ಜನಪದು ಕಥನವನ್ನಾಗಿಸಿದ್ದಾರೆ ಎಂಬುದನ್ನು ನೋಡಬಹುದು.

ಜನಪದ ಸಂಸ್ಕತಿಯಲ್ಲಿ ಒಂದೊಂದು ಹಬ್ಬಕ್ಕೂ ಒಂದೊಂದೂ ವಿಶೇಷವಿರುತ್ತದೆ. ಜನಪದರು ಆಚರಿಸುವ ಪಂಚಮಿ ಹಬ್ಬವೂ ಅಣ್ಣ ತಂಗಿಯರ ಭಾವನಾತ್ಮಕ ಪ್ರೀತಿಗೆ ಬೆಸುಗೆ ಹಿಡಿದಿರುವಂತದ್ದು. ಪಂಚಮಿ ಹಬ್ಬದಲ್ಲಿ ಮದುವೆಯಾಗಿ ಹೋದ ಅಕ್ಕ ತಂಗಿಯರು ತಮ್ಮ ಅಣ್ಣ ತಮ್ಮಂದಿರನ್ನು ಕಾಣಲು ತವರು ಮನೆಗೆ ಬರುವ ವಿಶೇಷ ಸಂದರ್ಭ. ಈ ಹಬ್ಬ ಇಂತಹ ಒಂದು ವಿಶೇಷ ಸಂದರ್ಭದಲ್ಲಿ ನಡೆದ ಒಂದು ಘಟನೆಯ ಕಥೆಯನ್ನ ಒಳಗೊಂಡು ಕಟ್ಟಿರುವಂತಹದ್ದು ನಾಗರಪಂಚಮಿ ಪದ.

ಪಂಚಮಿ ಹಬ್ಬವನ್ನು 'ನಾಗರ ಪಂಚಮಿ' ಎಂಬ ಪದನಾಮದಿಂದ ಆಚರಿಸಲು ಕಾರಣವನ್ನು ಕೊಡುವಂತದ್ದು. ಅಣ್ಣನಾದವನು ತಂಗಿಯನ್ನು ರಕ್ಷಣೆ ಮಾಡುವುದು ಧರ್ಮವಾಗಿರುತ್ತದೆ. ಆದರೆ ಅಣ್ಣನಾದವನೇ ತಂಗಿಯ ಬಗ್ಗೆ ಮೋಹಗೊಳ್ಳುವುದು, ಅವಳ ಶ್ರೀಮಂತಿಕೆಗೆ ಆಸೆ ಬೀಳುವುದು, ಅವಳನ್ನು ಕೊಲ್ಲುವ ಮಟ್ಟಕ್ಕೆ ಹೋದಾಗ ನಾಗಪ್ಪನೇ ಬಂದು ಇಂತಹ ಅಣ್ಣನನ್ನು ಸಾವನ್ನಪ್ಪುವಂತೆ ಮಾಡುವ ಸಂದರ್ಭ. ಆದ್ದರಿಂದಲೇ ಪಂಚಮಿ ಹಬ್ಬದಂದು ನಾಗಪ್ಪನಿಗೆ ವಿಶೆಷ ಪೂಜೆಗಳು ನಡೆಯುವಂತದ್ದು.

ನಾಡಿಗೆ ದೊಡ್ಡದು ನಾಗರ ಪಂಚಮಿ. ಇಂತಹ ಹಬ್ಬಕ್ಕೆ ತನ್ನ ಅಣ್ಣನು ತನ್ನನ್ನು ಕರೆಯುವುದಕ್ಕೆ ಬರುತ್ತಾನೆ ಎಂದು ಹೆಣ್ಣು ಮಗಳು ಅಣ್ಣನ ದಾರಿಯನ್ನೇ

ಕಾಯುತ್ತಿರುತ್ತಾಳೆ. ಹಬ್ಬಗಳ ಸಮಯದಲ್ಲಿ ಹೆಣ್ಣು ಮಕ್ಕಳು ತಮ್ಮ ತವರಿನವರು ಕರೆಯುವುದಕ್ಕೆ ಬರಲು ತಡವಾದಾಗ ಅವರು ಯಾವ ರೀತಿ ಕಾತರಿಸುತ್ತಾ ಇರುತ್ತಾರೆ ಎಂಬುದನ್ನು ಈ ಕೆಳಗಿನ ಸಾಲುಗಳಲ್ಲಿ ಕಾಣಬಹುದು.

ಪಂಚಮಿ ಹಬ್ಬಕ್ಕೆ ಉಳಿದಾವ ದಿನ ನಾಕ
ಅಣ್ಣ ಬರಲಿಲ್ಲ ಯಾಕೋ ಕರಿಯಾಕ[1]

ತಾಯಿ ಮಗನನ್ನು ಕರೆದು ಬುದ್ಧಿ ಹೇಳಿ ತನ್ನ ತಂಗಿಯನ್ನು ಪಂಚಮಿ ಹಬ್ಬಕ್ಕೆ ಕರೆತರಲು ಕಳುಹಿಸುತ್ತಾಳೆ. ಅಣ್ಣ ತಂಗಿಯ ಮನೆಗೆ ಹೋದಾಗ ಅವಳು ಪಡುವ ಸಂತೋಷಕ್ಕೆ ಮಿತಿಯೇ ಇರುವುದಿಲ್ಲ. ಅಣ್ಣ ಬಂದ ಕಾರಣ ವಿಶೇಷ ಅಡುಗೆಗಳನ್ನು ಮಾಡಿ ಬಡಿಸುತ್ತಾಳೆ. ಗಂಡನೂ ಸಹ ಭಾಮೈದನ ಕುಶಲೋಪರಿಗಳನ್ನು ವಿಚಾರಿಸಿ ಬಂದ ಕಾರ್ಯವನ್ನು ತಿಳಿಸುವಂತೆ ಕೇಳುತ್ತಾನೆ. ಆಗ ಅವನು ತಾಯಿ ತಿಳಿಸಿದಂತೆ ತಂಗಿಯನ್ನು ತವರಿಗೆ ಕರೆದುಕೊಂಡು ಹೋಗಲು ಬಂದಿರುವುದಾಗಿಯೂ, ತಾವು ದಯಮಾಡಿ ಕಳುಹಿಸಿಕೊಡಬೇಕೆಂದು ಕೇಳುತ್ತಾನೆ. ಅದರಂತೆ ಗಂಡನು ತನ್ನ ಮಡದಿಗೆ ತವರಿಗೆ ಹೋಗಲು ಹೇಳಿದ್ದುದಲ್ಲದೆ ಹೊಸ ಆಭರಣಗಳನ್ನು ತೊಟ್ಟು ಹೋಗುವಂತೆ ತಿಳಿಸುತ್ತಾನೆ. ಹೆಣ್ಣುಮಕ್ಕಳು ತನ್ನ ತವರು ಮನೆಗೆ ಹೋಗುವಾಗ ಗಂಡನ ಮನೆಯವರು ತನ್ನನ್ನು ಹೇಗೆ ನೋಡಿಕೊಂಡಿದ್ದಾರೆ ಎಂಬುದನ್ನು ತಿಳಿಸುವ ಬಗೆ ಮತ್ತು ಅವಳು ತೊಡುವ ಉಡುಗೆ – ತೊಡುಗೆ, ಗಂಡನ ಮನೆಯ ಶ್ರೀಮಂತಿಕೆಯ ಬಿಗುಮಾನ ದಂತೆಯೂ ಕಂಡುಬರಬಹುದು ಅಥವಾ ತನ್ನಲ್ಲಿರುವ ಹೊಸ ವಸ್ತುಗಳನ್ನು ತನ್ನ ತಾಯಿಗೆ ತೋರಿಸುವ ಅವಳ ಮಹದಾಸೆಯೂ ಆಗಿರಬಹುದು.

ಅಣ್ಣನಾದವನು ತಂಗಿಯ ವಸ್ತುಗಳಿಗೆ ಆಸೆ ಪಟ್ಟು ತಂಗಿಯನ್ನು ಕೊಲ್ಲಲು ಪ್ರಯತ್ನ ಮಾಡಿದಾಗ ದೇವರೆ ಶಿಕ್ಷೆಯನ್ನು ಕೊಡುವುದು. ತಂಗಿ ತನ್ನ ಅಣ್ಣನಿಗೆ ಒದಗಿದ ಕಷ್ಟವನ್ನು ನೋಡಿ ದುಃಖಿಸುತ್ತಾಳೆ. ಆದರೆ ಅವಳು ಸಹಾಯಮಾಡಲು ಅಸಾಯಕವಾಗುವಂತೆ ಅಣ್ಣನೆ ಅವಳನ್ನು ಕಟ್ಟಿಹಾಕಿದ್ದಾನೆ. ತಂಗಿಯನ್ನು ಮೋಸಗೊಳಿಸುವ ಸಂದರ್ಭದಲ್ಲಿ ಅಂದರೆ ಕಾಯುವವನೆ, ಕೊಲ್ಲಲ್‌ಪಡುವಾಗ ಅವಳ ಅಸಹಾಯಕತೆಗೆ ದೇವರೆ ಪ್ರತ್ಯಕ್ಷವಾಗುವುದು. ಅಧರ್ಮದ ಮುಂದೆ ಧರ್ಮ ಗೆಲ್ಲುವ ಹಾಗೆ ಕಟ್ಟಲ್ಪಟ್ಟಿದ್ದಾರೆ. ರಾಜ ಬೇಟೆಗೆ ಹೋದಾಗ ಇವಳಿಗಾದ ಅನ್ಯಾಯವನ್ನು ಕಂಡು ಅವಳ ತಂದೆ ತಾಯಿಗೆ ಹೇಳಿಕಳಿಸುತ್ತಾನೆ. ರಕ್ಷಣೆ ಇಲ್ಲದ ತಾಯಿಮನೆಗಿಂತ ಚೆನ್ನಾಗಿ ನೋಡಿಕೊಳ್ಳುವ ಗಂಡನ ಮನೆಗೆ ಹೋಗುವಂತೆ ರಾಜ ತಿಳಿಯಪಡಿಸುತ್ತಾನೆ. ಹಬ್ಬಗಳು ಸಂಸ್ಕೃತಿಯ ಪ್ರತೀಕವಾಗಿ ಇಂದಿಗೂ ಆಚರಣೆಗಳಿಗೆ ಒಳಪಡುತ್ತಿರುತ್ತವೆ. ಆದ್ದರಿಂದಲೆ

ನಾಗರ ಪಂಚಮಿಯ ಹಬ್ಬದದಂದು ಅಣ್ಣನ ಬೆನ್ನಿಗೆ ಅರಿಶಿಣ ಹಚ್ಚಿ ಅವರ ಅಣ್ಣ ತಂಗಿ ಸಂಬಂಧವನ್ನು ಗಟ್ಟಿಯಾಗಿ ಮಾಡಿಕೊಳ್ಳುತ್ತಾರೆ.

ಅಡಿಟಿಪ್ಪಣಿ:

1. ದಿನಾಂಕ 04.08.2008 ಪ್ರಜಾವಾಣಿ ಲೇಖನ 'ನಾಗದೇವನಿಗೆ ತನಿ ಪೂಜೆ'

## ಅಧ್ಯಾಯ – 4
# ಜನಪದ ಕಥನ ಗೀತೆಗಳ ಭಾಷೆ

ಜನಪದರು ಕಾವ್ಯಗಳನ್ನು ಆಡುವ ಮಾತುಗಳಲ್ಲಿ ಕಟಲ್‌ಪಟ್ಟಿದ್ದಾರೆ. ಈ ಆಡುಮಾತುಗಳಲ್ಲಿ ಕಾವ್ಯಮಯವಾಗಿಸಿಕೊಂಡಿರುವುದು ದ್ವಿಪದಿ, ತ್ರಿಪದಿ, ಚೌಪದಿಗಳನ್ನು ಬಳಸಿಕೊಂಡರೂ ಹೆಚ್ಚಾಗಿ ತ್ರಿಪದಿಯಿಂದ ಕೂಡಿರುವಂತಹವು.

ಕಥನ ಗೀತೆಗಲ್ಲಿ ಉಪಮೆ, ಪ್ರತಿಮೆ ಸಂಕೇತಗಳನ್ನು ಬಳಸಿಕೊಂಡಾಗ ಹೇಗೆ ಕಾವ್ಯದ ಸೌಂದರ್ಯ ಹೆಚ್ಚುತ್ತದೆ ಎಂಬುದನ್ನು ಜನಪದರು ತಮ್ಮ ಕಾವ್ಯಗಳಲ್ಲಿ ಅಲಲ್ಲಿ ಬಳಸಿಕೊಂಡಿದ್ದಾರೆ. ಕೆಲವೊಂದು ಜನಪದ ಗೀತೆಗಳ ಜನಪ್ರಿಯತೆಗೆ ಅಲ್ಲಿರುವ ಭಾಷಾಪ್ರಯೋಗವೆ ಕಾರಣವೆಂದು ಹೇಳಬಹುದು .ಇದಕ್ಕೆ ಉದಾಹರಣೆಗೆ ಉತ್ತರ ದೇವಿಯ ಕಥನ ಕಾವ್ಯದ ಜನಪ್ರಿಯತೆಗೆ ಅದನ್ನು ಕಟ್ಟಿರುವ ಭಾಷಾಶೈಲಿಯೇ ಮುಖ್ಯವಾಗಿರುವಂತಹದ್ದು

ಗುಣಸಾಗರಿ ಕಥನ ಕಾವ್ಯದಲ್ಲಿ ಗುಣಸಾಗರಿ ನಾದಿನಿಯರ ಗುಣ ವಿಶೇಷಣವನ್ನು ನಿರೂಪಿಸುವಲ್ಲಿ ಉಪಮೇಯ, ಹೋಲಿಕೆ ಕೊಡುವ ಮೂಲಕ ಅವರ ಭಾಷಾ ಪ್ರಯೋಗವನ್ನು ನೋಡಬಹುದು. ಜನಪದರ ದಿನನಿತ್ಯದ ಜೀವನದಲ್ಲಿ ನೋಡಿದ ಅಥವಾ ಬಳಸುವ ವಸ್ತುಗಳನ್ನೆ ಬಳಸಿಕೊಳ್ಳುವ ರೀತಿ ವಿಶಿಷ್ಟವಾದದ್ದು.

ಅತ್ತೇನು ಅಂಬ್ಲಿಲ್ಲ, ಮಾವೇನು ಅಂಬ್ಲಿಲ್ಲ
ನಸುಗುನ್ನಿ ಅಂತೋರು ನಾದಿನಿಯರು[1]

ಎಂಬ ಸಾಲುಗಳಲ್ಲಿ 'ನಸುಗುನ್ನಿ' ಕಾಯಿಯ ಗುಣವಿಶೇಷವನ್ನು ನಾದಿನಿಯರಿಗೆ ಹೋಲಿಸಲಾಗಿದೆ. ನಸುಗುನ್ನಿ ಉಪಯೋಗಕ್ಕಿಂತ ಬೇರೆಯವರಿಗೆ ಕೆಟ್ಟದ್ದನ್ನೆ ಬಯಸುವಂತಹದ್ದು. ನಾದಿನಿಯರು ತನಗೆ ಮಾಡುತ್ತಿರುವ ಅಪಕಾರವನ್ನು ನಸುಗುನ್ನಿಕಾಯಿಗೆ ಹೋಲಿಸಲಾಗಿದೆ.

ಉತ್ತರದೇವಿ ಕಥನ ಕಾವ್ಯದಲ್ಲಿ ಉತ್ತರದೇವಿ ತವರು ಮನೆಗೆ ಹೋಗುತ್ತಿರುವುದನ್ನು ಗಿಡಮರಗಳೆ ತಡೆಯುತ್ತಿರುವ ಸನ್ನಿವೇಶದಲ್ಲಿ ಪ್ರಕೃತಿಯನ್ನೆ ಪ್ರತೀಕವಾಗಿ ಬಳಸಿಕೊಂಡಿದ್ದಾರೆ. ಅದೇ ರೀತಿ ಉತ್ತರದೇವಿ ಉತ್ತರ ಮಳೆಯಾಗಿ ಹರಿದಳು ಎಂಬ ಮಾತು ಅರ್ಥವತ್ತಾಗಿ, ಧ್ವನಿರಮ್ಯವಾಗಿ ಬಂದಿರುವುದನ್ನು ಗಮನಿಸಬಹುದು. ಅವಳ ಪತಿಯ ಕಡು ದುಃಖವೇ ಕಡಲಾಗಿ ಹರಿಯಿತೊ ಎಂಬಂತೆ ಆ ಮಳೆ ಸುರಿದು ಭೂಮಿಯನ್ನು ಶಾಂತಗೊಳಿಸಿತು. ಉತ್ತರದೇವಿಯ ಪತಿಯ

ನಿಟ್ಟುಸುರಿನಿಂದ ಕಾದಲೋಕದಲ್ಲಿ ತಂಪನ್ನು ಬಿತ್ತಿತ್ತು ಎಂಬ ಸಾಂಕೇತಿಕ ಅರ್ಥಬರುವಂತೆ ರಚಿಸಿದ್ದಾರೆ.

ಬಾಣಂತಿ ಹಾಡು ಕಥನ ಗೀತೆಯಲ್ಲಿ ಅತ್ಯಂತ ಸರಳ ಭಾಷೆಯೊಳಗೆ ಅರ್ಥಪೂರ್ಣವಾದ ಅಂಶಗಳನ್ನು ಬಳಸಿದ್ದಾರೆ ಎಂಬುದನ್ನು ನೋಡಬಹುದಾಗಿದೆ.

ಹತ್ತು ಕಾಲೇಣಿ ಹಟ್ಟಾಕೆ ಹಾಕ್ಯಾಳು
ಹತ್ತು ಸಲ ನಿನ್ನ ಹತ್ತಿಳಿದಾಳೆ ಶಿವನೆ[2]

ಇಲ್ಲಿ ಹತ್ತುವುದು ಇಳಿಯುವುದು, ಬಾಣಂತಿಯ ಸಾವು-ಬದುಕುಗಳ ಹೊಯ್ದಾಟವನ್ನು ಚಿತ್ರಿಸುವ ಸಂಕೇತವಾಗಿ ಬಳಸಿಕೊಂಡಿರುವುದನ್ನು ನೋಡಬಹುದು.

ಕಾಳಿಂಗರಾಯ ರಾಯ ಕಥನ ಕಾವ್ಯದಲ್ಲಿ ವೃದ್ದತನವನ್ನು ಚಿತ್ರಿಸುವುದಕ್ಕೆ ಅವರ ಕಾವ್ಯ ಕೌಶಲ್ಯ ಯಾವ ರೀತಿ ಇದೆ ಎಂಬುದನ್ನು ಕಾಣಬಹುದು.

ಕೊಳಗದ ಬಾಯಂಗೆ ಒಂದೊಂದು ಹಲ್ಲಿಲ್ಲ
ಮುದಿಗೂಬೆ ಮಕ್ಕಳ್ನ ಭ್ರಮಿಸಿದೆ
ಮುದಿಗೂಬೆ ಮಕ್ಕಳನ್ನ ಭ್ರಮಿಸಿದೆಂದೇ ದೊರೆರಾಯ
ಮಾರೆ ಒಯ್ಯೋಯ್ದು ನಗುತ್ತಾನೆ[3]

ವೃದ್ದಪ್ಯಾತನವನ್ನು ಅವನ ದೇಹ ರಚನೆಯ ಮೂಲಕ ಕಟ್ಟುಕೊಟ್ಟಿರುವುದು ಇಲ್ಲಯ ವಿಶೇಷವಾಗಿದೆ.

ಕಾಳಿಂಗರಾಯ ಕಾವ್ಯದಲ್ಲಿ ಮದರಂಬೆ ಏಳನೆ ತಿಂಗಳಲ್ಲಿ ಅವಳು ಭಯಸುವ ಮಣ್ಣು ಸಾಮಾನ್ಯ ಮಣ್ಣನ್ನಲ್ಲ. ಅವಳು ಏರಿ ಹಿಂದೆಯ ಗದ್ದೆಯಲ್ಲಿ ಬೆಳೆದ ಬೆಳಸಿ ಅಂದರೆ ಹದಕ್ಕೆ ಬಂದ ಹಸಿಹಸಿಯಾಗಿದ್ದು ಸಮೃದ್ಧ ಹಾಲನ್ನು ತುಂಬಿಕೊಂಡಿರುವಂತಹದ್ದು. ಅಂತಹ ಮಣ್ಣನ್ನು ಆಸೆ ಪಡುತ್ತಾಳೆ ಎಂಬುದನ್ನು ತಿಳಿಸುವಲ್ಲಿ ಬಳಸಿರುವ ಮಾತುಗಳು ಹೇಗೆ ಕಾವ್ಯಮಯವಾಗಿ ಹೊರಹೊಮ್ಮಿದೆ ಎಂಬುದನ್ನು ಈ ಕೆಳಗಿನ ಸಾಲುಗಳಲ್ಲಿ ನೋಡಬಹುದು.

ಏಳನೇ ತಿಂಗಳಿಗೆ ನಾರೇನು ಭ್ರಮಿಸ್ಯಾಳೆ
ಏರಿ ಹಿಂದಾಲ ಯಳಿ ಬೆಳಸೆ
ಏರಿ ಹಿಂದಾಲ ಯಳಿ ಬೆಳಸೆ। ಒಳಗಿರುವ
ಬೇರಿನ ಮಣ್ಣ ಭ್ರಮುಸ್ಯಾಳೆ[4]

ಅದೇ ರೀತಿ ಕಾಳಿಂಗರಾಯ ಬೇಟೆಯನ್ನು ಆಡುವಷ್ಟು ಪ್ರಬುದ್ಧತೆಯನ್ನು ಹೊಂದಿರಲಿಲ್ಲವೆಂಬುದನ್ನು ಸ್ಪಷ್ಟಪಡಿಸಲು ಅವರು ಬಳಸಿಕೊಂಡ ಪದ ಪ್ರಯೋಗ ಮತ್ತು ಅದು ಕೊಡುವ ಅರ್ಥ ಅವರ ಕಾವ್ಯಶೈಲಿಯ ಶ್ರೀಮಂತಿಕೆಯನ್ನು ಕಾಣಬಹುದಾಗಿದೆ.

ದೊರೆ ಮಗನಾಗಿ ಒಳಗೆ ನಾನಿರಲಾರೆ
ಹೊರಡಬೇಕೆಂದ ಮಿಕಬೇಟಿ
ಒಂದು ಕೆನ್ನೀಲಾಲು ಒಂದು ಕೆನ್ನೀಲಿ ರೈತ
ನಿನಗ್ಯಾಕೋ ಕಂದಯ್ಯ ಮಿಕಬೇಟೆ[5]

ಈ ಸಾಲುಗಳಲ್ಲಿ ಬಳಸಿರುವ 'ಹಾಲು' ಮತ್ತು ರೈತ ಶಬ್ದಗಳಲ್ಲಿ ಅಡಗಿರುವ ಅರ್ಥ ಕಾಳಿಂಗರಾಯನ ಬಾಲ್ಯವನ್ನು ಹಾಗೂ ಅವನು ಬೇಟೆಯನ್ನಾಡುವಷ್ಟು ಪ್ರಬುದ್ಧತೆಯನ್ನು ಪಡೆದಿಲ್ಲ ಎಂಬುದನ್ನು ಸೂಚಿಸುವುದಕ್ಕೆ ಅವರು ಕೊಡುವ ಹಾಲು ಮತ್ತು ರೈತ ಪದಗಳ ಬಳಕೆಯನ್ನು ಕಾವ್ಯದಲ್ಲಿ ತಂದಿದ್ದಾರೆ ಎಂಬುದನ್ನು ನೋಡಬಹುದಾಗಿದೆ.

ಕಥನ ಕಾವ್ಯಗಳಲ್ಲಿ ಭಾಷೆ ಸಂಭಾಷಣೆಯ ಮೂಲಕ ಮುಂದುವರೆಯುತ್ತಿರುವುದನ್ನು ಕಾಣಬಹುದಾಗಿದೆ. ಉತ್ತರದೇವಿ, ಕಾಳಿಂಗರಾಯ ಕಥನ ಕಾವ್ಯಗಳಲ್ಲಿ ಹೆಚ್ಚು ಸಂಭಾಷಣೆಯನ್ನೆ ಬಳಸಿಕೊಂಡಿದ್ದಾರೆ. ಅತ್ತೆ ತಡವಾಗುವುದಕ್ಕೆ ಕಾರಣ ಕೇಳಿದಾಗ ಉತ್ತರದೇವಿ ಕೊಡುವ ಉತ್ತರ ದೇವಿ ಕೊಟ್ಟ ಉತ್ತರಕ್ಕೆ ಅತ್ತೆ ಕೊಡುವ ಉತ್ತರ, ಕೆರೆಗೆ ಕಾರ, ಕೆಂಚಮ್ಮ, ಚಿಕ್ಕೋಳು ಹಿರಿದಿಮ್ಮವ್ವ ಹೀಗೆ ಎಲ್ಲಾ ಕಥನ ಗೀತೆಗಳು ಸಂಭಾಷಣೆಯ ಮೂಲಕವೆ ನಡೆಯುವಂತಹವು. ಹೆಚ್ಚು ಪ್ರಾಮುಖ್ಯತೆ ಸಂಭಾಷಣೆಗೆ ಕೊಟ್ಟಿರುವುದನ್ನು ಕಥನ ಗೀತೆಗಳಲ್ಲಿ ನೋಡಬಹುದು.

ನಾಗವ್ವನ ಬದುಕು ಘೋರ ದುರಂತಕ್ಕೆ ಈಡಾದ ಬಗೆಯನ್ನು ಚಿತ್ರಿಸುವ ಅವರ ಭಾಷೆಯನ್ನು ನೋಡಬಹುದು. ಮದುವೆಯಾಗಿ ಗಂಡನ ಮನೆಯಲ್ಲಿ ಸುಖವಾಗಿ ಜೀವನ ನಡೆಸ ಬೇಕಾದವಳ ಬದುಕು ಹೇಗೆ ದುರಂತಕ್ಕೆ ಕಾರಣವಾಯಿತು ಎಂಬುದನ್ನು ಈ ರೀತಿ ಚಿತ್ರಿಸಿರುವುದನ್ನು ಕಾಣಬಹುದು.

ಹೆಣ್ಣಿಗೆ ಮಣ್ಣು ಬಿದ್ದೊ, ಕಣ್ಣಿಗೆ ಸತ್ತೆ ಬಿದ್ದೊ
ಸಣ್ಣ ಸೀರೆ ಮ್ಯಾಲೆ ಕಿಡಿ ಬಿದ್ದೊ ನಾಗವ್ವನ
ಹಣೆಗಂಟು ನಲುಗಿ ಉರಿದ್ದೋದೊ[6]

ಎಂಬ ಸಾಲುಗಳು ಎಷ್ಟು ಕಾವ್ಯಮಯವಾಗಿಸಿದ್ದಾರೆ ಎಂಬುದನ್ನು ನೋಡಬಹುದಾಗಿದೆ.

ಟಿಪ್ಪಣಿಗಳು:

1. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು',, ಗುಣಸಾಗರಿ, ಪುಟ ಸಂಖ್ಯೆ 137, ಮೈಸೂರು ವಿಶ್ವವಿದ್ಯಾಲಯ
2. ತಲ್ವಾಡಿ ಬಿ.ಎಸ್ 'ಹೆಂಗಸರ ಹಾಡ್ಗತೆಗಳು', ಪುಟ ಸಂಖ್ಯೆ 13 ಭಾವನಾ ಪ್ರಕಾಶನ, ಮೈಸೂರು
3. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಕಾಳಿಂಗ ರಾಯ, ಪುಟ ಸಂಖ್ಯೆ 29
4. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಕಾಳಿಂಗ ರಾಯ, ಪುಟ ಸಂಖ್ಯೆ 32
5. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಕಾಳಿಂಗ ರಾಯ, ಪುಟ ಸಂಖ್ಯೆ 42
6. ಮಹಾಸತಿ ಆಚರಣೆ ಒಂದು ಅಧ್ಯಯನ, ನಾಗವ್ವ ಕಥನ ಕಾವ್ಯ.

# ಸಮಾರೋಪ

ಇಲ್ಲಿಯವರೆಗೆ ಸಂಗ್ರಹಗೊಂಡ ಜನಪದ ಸಾಹಿತ್ಯದ ಎಲ್ಲ ಪ್ರಕಾರಗಳನ್ನು ಕುರಿತು ಅನೇಕ ವಿದ್ವಾಂಸರು ಸಂಶೋಧನೆ ನಡೆಸಿರುತ್ತಾರೆ. ಕಥನ ಗೀತೆಗಳನ್ನೆ ಕೇಂದ್ರವಾಗಿಟ್ಟುಕೊಂಡು ಸಂಶೋಧನೆ ನಡೆಸಿರುವುದು ನನಗೆ ಕಂಡು ಬಂದಿರುವುದಿಲ್ಲ. ಇದರಿಂದಾಗಿ ಇದನ್ನು ಪ್ರಥಮ ಪ್ರಯತ್ನವೆಂದು ಭಾವಿಸಲ್ಪಡುತ್ತೇನೆ. ಈ ಪ್ರಯತ್ನದಲ್ಲಿ ಎಲ್ಲಾ ರೀತಿಯ ಕಥನ ಗೀತೆಗಳನ್ನು ಆಯ್ದುಕೊಳ್ಳಲು ಸಾಧ್ಯವಾಗಿರುವುದಿಲ್ಲ ಪ್ರಸ್ತುತ ಅಧ್ಯಯನದ ಮಿತಿಗೊಳಪಟ್ಟಂತ ಕಥನ ಗೀತೆಗಳನ್ನು ಮಾತ್ರ ಆಯ್ದುಕೊಂಡು ಚರ್ಚಿಸಿದ್ದೇನೆ.

ಈ ಕಥನ ಗೀತೆಗಳ ಬಗ್ಗೆ ಪತ್ರಿಕೆಗಳಲ್ಲಿ ಇತ್ತೀಚೆಗೆ ಸಾಕಷ್ಟು ಚರ್ಚೆಗಳು, ಚಿಂತನೆಗಳು ನಡೆದಿರುತ್ತವೆ. ಈ ಚಿಂತನೆಗಳಲ್ಲಿ ಬಹಳಷ್ಟು ಅವಳ ಸಾವನ್ನು ಕುರಿತಾಗಿದ್ದು, ಸಾವನ್ನು ಹೊರತು ಪಡಿಸಿ ಕಥನ ಗೀತೆಗಳನ್ನು ಒಳಹೊಕ್ಕು ಚರ್ಚಿಸಿದಂತಹವಲ್ಲ ಆದರೆ ಅವು ಹೊಂದಾಣಿಕೆಯನ್ನು ಕುರಿತು ಬುದ್ಧಿಯನ್ನು ತಿಳಿಯಪಡಿಸುವ ಕಥನ ಗೀತೆಗಳಾಗಿವೆ ಮತ್ತು ಮನುಷ್ಯ ಇಕ್ಕಟ್ಟಿನ ಪರಿಸ್ಥಿತಿಯಲ್ಲಿ ಯಾವ ರೀತಿ ವರ್ತಿಸುತ್ತಾನೆ ಎಂಬುದನ್ನು ನೋಡಬಹುದು. ಕಾಲ ಮುಂದುವರೆದಂತೆ ಮೇಲಿನ ಕಥನ ಗೀತೆಗಳ ಕಥಾ ವಸ್ತುವನ್ನು ಹೆಣ್ಣಿಗೆ ಶೋಷಣೆ ಎಂದು ಹಾಗೂ ಈಗಲೂ ಹೆಣ್ಣಿನ ಶೋಷಣೆ ನಡೆಯುತ್ತಿದೆ ಎಂದು ಬಿಂಬಿಸಿರುವುದು ಕಾಣುತ್ತಿವೆ. ಇದನ್ನು ಹೆಣ್ಣಿನ ಶೋಷಣೆ ಮತ್ತು ಹೊಂದಾಣಿಕೆಗಳ ನಡುವಿನ ಜಿಜ್ಞಾಸೆ ಎನ್ನುವ ನಿಟ್ಟಿನಲ್ಲಿ ವಿಶ್ಲೇಶಿಸುವುದು ಅವಶ್ಯ ಎಂಬ ಭಾವನೆ ನನ್ನದಾಗಿದೆ.

ಒಟ್ಟಾರೆಯಾಗಿ ಜನಪದ ಕಥನ ಗೀತೆಗಳು ಬದುಕನ್ನು ಸ್ಪರ್ಶಿಸುವಂತಹವು. ಇಲ್ಲಿ ವೈಯಕ್ತಿಕ ಬದುಕಿಗಿಂತ, ಸಮೂಹ ಬದುಕಿಗೆ ಹೆಚ್ಚು ಪ್ರಾಶಸ್ತ್ಯವನ್ನು ನೀಡಿರುವಂತಹವು. ಆದ್ದರಿಂದ ಈ ಕಥನ ಗೀತೆಗಳನ್ನು ವೈಯಕ್ತಿಕ ಮನೋಭಾವನೆಯಿಂದ ನೋಡುವುದಕ್ಕಿಂತ, ಸಮಾಜಿಕ ಮನೋಭಾವನೆಯಿಂದ ನೊಡುವುದು ಒಳ್ಳೆಯದೆಂದು ನನ್ನ ಅನಿಸಿಕೆ.

## ಅನುಬಂಧ


1. ಕಂಬಾರ (ಚಂದ್ರಶೇಖರ) 'ಮಾತಾಡು ಲಿಂಗವೆ', ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು, 1973
2. ಕಾವ್ಯ ಜೀವಿ.ಗು.ನಾ 'ಹಾಡು ಹೇಳೆ ತಂಗಿ ದನಿ ಎತ್ತಿ', ಬೆಂಗಳೂರು, 1979
3. ಕೃಷ್ಣಶರ್ಮ (ಬೇಟಗೇರಿ) 'ಕನ್ನಡ ಜಾನಪದ ಸಾಹಿತ್ಯ', ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, 1976
4. ಕೇಶವ ಭಟ್ಟ. ಟಿ 'ದಕ್ಷಿಣ ಕನ್ನಡ ಜಿಲ್ಲೆಯ ಜನಪದ ಗೀತೆಗಳು', ಕನ್ನಡ ಸಾಹಿತ್ಯ ಪರಿಷತ್, 1996
5. ಕೇಶವ ಭಟ್ಟ. ಟಿ 'ಹಾಡಿನ ಚೂಡಾಮಣಿ', ಕನ್ನಡ ಸಾಹಿತ್ಯ ಪರಿಷತ್, 1971
6. ಕೋಡಿರಾಂಪುರ (ರಂಗಾರೆಡ್ಡಿ) 'ಬಂಡಾಯ ಜಾನಪದ', ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, 1995
7. ಖಂಡೋಬಾ ಪಿ.ಕೆ 'ಜನಪದ ಕಥನ ಗೀತೆಗಳು' ಕರ್ನಾಟಕ ಸಾಹಿತ್ಯ ಅಕಾಡಮಿ, ಬೆಂಗಳೂರು, 1996
8. ಗಾಯಿತ್ರಿ ನಾವಡ 'ಕರಾವಳಿ ಜನಪದ ಸಾಹಿತ್ಯದಲ್ಲಿ ಸ್ತ್ರೀವಾದಿ ನೆಲೆಗಳು' ಸಿರಿ ಪ್ರಕಾಶನ, ಹೊಸಪೇಟೆ 1999
9. ಚೆನ್ನಮಲ್ಲಪ್ಪ ಮತ್ತು ಇತರರು 'ಗರತಿಯ ಹಾಡು ತ್ರಿಪದಿ ಸಂಗ್ರಹ', ಸಮಾಜ ಪುಸ್ತಕಾಲಯ, ಧಾರವಾಡ 2000
10. ತಲ್ವಾಡಿ ಬಿ.ಎಸ್ 'ಹೆಂಗಸರ ಹಾಡ್ಗತೆಗಳು', ಭಾವನಾ ಪ್ರಕಾಶನ, ಮೈಸೂರು 1985
11. ತಪಸ್ವಿಕುಮಾರ್ 'ಜನಪದ ಕಥನ ಗೀತೆಗಳ ಸಾಂಸ್ಕೃತಿಕ ಅಧ್ಯಯನ', ಮೈಸೂರು ವಿಶ್ವವಿದ್ಯಾಲಯ, ಮೈಸೂರು 1982
12. ನಾಗರಾಜಯ್ಯ (ಹಂಪಿ) 'ಜಾನಪದ ಅಧ್ಯಯನ ವಿಚಾರ ಸಂಕಿರಣ', ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 1982
13. ನಾಗವಾರ ಕಾಳೇಗೌಡ 'ಬಯಲು ಸೀಮೆಯ ಲಾವಣಿಗಳು', ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆ–183, ಮೈಸೂರು 1973
14. ನಾಯಕ ಎನ್.ಆರ್ 'ಹಾಲಕ್ಕಿ ಒಕ್ಕಲಿಗರ ಜನಪದ ಗೀತೆಗಳು', ಧಾರವಾಡ 1984
15. ಕಿ.ರಂ.ನಾಗರಾಜ ಮತ್ತು ಬಸವರಾಜು ಕಲ್ಗುಡಿ (ಸಂ) 'ಬಹುರೂಪಿ', ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 2002
16. ಪರಮಶಿವಯ್ಯ ಜಿ.ಶಂ 'ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು', ಮೈಸೂರು ವಿಶ್ವವಿದ್ಯಾಲಯ, ಮೈಸೂರು 1979

17. ಬೋರಲಿಂಗಯ್ಯ ಹಿ.ಚಿ 'ವಿಸ್ಮೃತಿ ಮತ್ತು ಸಂಸ್ಕೃತಿ', ಸಿ.ವಿ.ಜಿ ಪಬ್ಲಿಕೇಷನ್, ಬೆಂಗಳೂರು 2000
18. ಡಾ॥ ಬಸವರಾಜು ಕಲ್ಗುಡಿ, 'ಮಹಾಸತಿ ಆಚರಣೆ ಒಂದು ಅಧ್ಯಯನ', ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ
19. ಮೈಲಹಳ್ಳಿ ರೇವಣ್ಣ 'ಚಿತ್ರದುರ್ಗ ಸುತ್ತಿನ ಜನಪದ ಕಾವ್ಯಗಳು', ಮೈಸೂರು ವಿಶ್ವವಿದ್ಯಾಲಯ, ಮೈಸೂರು 1984
20. ಡಾ॥ ಮೈಲಹಳ್ಳಿ ರೇವಣ್ಣ 'ಮದಾರ ಸಂಸ್ಕೃತಿ ಮತ್ತು ಸಾಹಿತ್ಯ', ರಾಜ ಪ್ರಕಾಶನ, ಮೈಸೂರು 2004
21. ಡಾ॥ ಮಂಗಳಾ ಶ್ರೀಧರ್ 'ಬುಡಕಟ್ಟು ವೈದ್ಯ ಸಂಸ್ಕೃತಿ', ಮುದ್ದುಶ್ರೀ ಗ್ರಂಥಮಾಲೆ, ಬೆಂಗಳೂರು 2008
22. ಮಲ್ಲಾಪುರ ಪಿ.ವ್ಹಿ 'ಜಾನಪದ ಕಾವ್ಯದಲ್ಲಿ ಜೀವನ ಧರ್ಮ', ಉಪನ್ಯಾಸ ಗ್ರಂಥಮಾಲೆ-109, ಧಾರವಾಡ 1970
23. ರಾಜಪ್ಪ ಟಿ.ಎಸ್ 'ಕೆರೆಹೊನ್ನಮ್ಮ ಮತ್ತು ಇತರ ಲಾವಣಿಗಳು' ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು 1974
24. ರಾಜಪ್ಪ ದಳವಾಯಿ 'ಕನ್ನಡ ಸಾಹಿತ್ಯ ಕೋಶ', ದಳವಾಯಿ ಪ್ರಕಾಶನ, ಜ್ಞಾನಭಾರತಿ, ಬೆಂಗಳೂರು 2008
25. ಲಿಂಗಯ್ಯ .ಡಿ 'ಬಯಲು ಸೀಮೆಯ ಜನಪದ ಗೀತೆಗಳು', ಕನ್ನಡ ಸಾಹಿತ್ಯ ಪರಿಷತ್ ತ್ರೈವಾರ್ಷಿಕ ಯೋಜನೆಯ ಪುಸ್ತಕ ಮಾಲೆ, ಬೆಂಗಳೂರು 1973
26. ಸಿ.ವಿ. ವತ್ಸಲಾ ದೇವಿ ಮತ್ತು ಎ. ಶ್ರೀಪಾದ, 'ಪ್ರಾಚೀನ ಕಾವ್ಯಾಂಜಲಿ', ಪ್ರಸಾರಾಂಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. 2001
27. ಡಾ॥ ಎಚ್.ಎಸ್ ಶ್ರೀಮತಿ 'ಕನ್ನಡ ಮಹಿಳಾಸಾಹಿತ್ಯ ಚರಿತ್ರೆ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ 2006
28. ಡಾ॥ ಎಚ್.ಎಸ್ ಶ್ರೀಮತಿ 'ಸ್ತ್ರೀವಾದ', ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ 2006
29. ಸಂಧ್ಯಾರೆಡ್ಡಿ ಕೆ.ಆರ್ 'ಜನಪದ ಸಾಹಿತ್ಯದಲ್ಲಿ ಮಹಿಳೆ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು 2000
30. ಎಸ್.ಜಿ.ಸಿದ್ದರಾಮಯ್ಯ ಮತ್ತು ಕೆ.ಆರ್.ಸಂಧ್ಯಾರೆಡ್ಡಿ 'ಸುವರ್ಣ ಜನಪದ ಕಾವ್ಯ', ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು 2006
31. ಶಶಿಕಲಾ ಮೋಳ್ವಿ 'ಹರದೆಯರ ಹಾಡುಗಳು', ಅರವಿಂದ ಪ್ರಕಾಶನ, ಮಹಾಗಾಂವ 1971
32. ತಿ.ನಂ.ಶಂಕರನಾರಾಯಣ 'ಕಾನಪದ ವಿಚಾರ', ಹಂಸಧ್ವನಿ ಪ್ರಕಾಶನ ರಾಜಾಜಿನಗರ, ಬೆಂಗಳೂರು 1978

## ನಿಘಂಟು, ಪತ್ರಿಕೆಗಳು ಮತ್ತು ವ್ಯಕ್ತಿಗಳು

1. ಕನ್ನಡ ನಿಘಂಟು, ಕನ್ನಡ ಸಾಹಿತ್ಯ ಪರಿಷತ್ತು.
2. ಕನ್ನಡ ರತ್ನ ಕೋಶ, ಕನ್ನಡ ಸಾಹಿತ್ಯ ಪರಿಷತ್ತು.
3. ದಿನಾಂಕ 06.07.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) ಲೇಖನ 'ಜೀವ ವಿರೋಧಿ ಕೆರೆಗೆ ಹಾರ'.
4. ದಿನಾಂಕ 13.07.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) 'ಜೀವ ವಿರೋಧಕ್ಕೆ ತ್ಯಾಗದ ಚೌಕಟ್ಟು'.
5. ದಿನಾಂಕ 20.07.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) 'ಈಗಲೂ ಇದ್ದಾರೆ ಭಾಗೀರಥಿಯರು'.
6. ದಿನಾಂಕ 27.07.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) 'ಈಗಲೂ ಇದ್ದಾರೆ ಭಾಗೀರಥಿಯರು'.
7. ದಿನಾಂಕ 03.08.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) 'ಪಠ್ಯದಲ್ಲಿ ಹೆಣ್ಣು ಜೀವ ವಿರೋಧಿ ಚಿತ್ರಣ'.
8. ದಿನಾಂಕ 10.08.2008 ರ ಪ್ರಜಾವಾಣಿ (ಸಾಪ್ತಾಹಿಕ ಪುರವಣಿ) 'ಒರೆಗಲ್ಲಿಗೆ ಹಚ್ಚುವ ಮನಸ್ಥಿತಿ ಏನಾಯಿತು'.
9. ದಿನಾಂಕ 06.08.2008 ರ ಪ್ರಜಾವಾಣಿ ಲೇಖನ 'ಶ್ರಾವಣದಲ್ಲಿ ಹಬ್ಬಗಳ ಮೆರವಣಿಗೆ'
10. ದಿನಾಂಕ 04.08.2008ರ ಲೇಖನ 'ನಾಗದೇವನಿಗೆ ತನಿ ಪೂಜೆ'
11. ಚಿಕ್ಕತಾಯಮ್ಮ, ಹಚ್ಚೆ ಕಲಾವಿದರು, ಲಕ್ಷ್ಮೀಪುರ, ಚೆನ್ನಪಟ್ಟಣ ತಾಲ್ಲೂಕು
12. ಉಮೇಶ, ಜಾನಪದ ವಿದ್ಯಾರ್ಥಿ, ಜಾನಪದ ಲೋಕ.